ಅರಣ್ಯ ಸಂರಕ್ಷಣಾಧಿಕಾರಿಯವರ ಕಚೇರಿಗಳಲ್ಲಿ ಹಾಗೂ ಬೆಂಗಳೂರಿನ ಅರಣ್ಯ ಭವನದ ಮಾರಾಟ ಕೌಂಟರ್‌ನಲ್ಲಿ **ರೂ.75/–ನ್ನು** ನಗದಾಗಿ ಪಾವತಿಸಿ ನಿಗದಿತ ನಮೂನೆಯ ಅರ್ಜಿಯನ್ನು (ಅಭ್ಯರ್ಥಿಗಳ ಸೂಚನಾ ಪುಸ್ತಕ ಮತ್ತು ಅರ್ಜಿ ಸಲ್ಲಿಸಬೇಕಾದ ವಿಳಾಸವಿರುವ ಲಕೋಟೆಯೂ ಸೇರಿ) ಪಡೆಯಬಹುದು.

**5.0 ಅರ್ಜಿ ಸಲ್ಲಿಸುವ ವಿಧಾನ**

ನಿಗದಿತ ನಮೂನೆಯಲ್ಲಿರುವ ಅರ್ಜಿಯನ್ನು ಸರಿಯಾಗಿ, ಸ್ಪಷ್ಟವಾಗಿ ಮತ್ತು ಪೂರ್ಣವಾಗಿ ಭರ್ತಿ ಮಾಡಿ, ಭರ್ತಿ ಮಾಡಿದ ಅರ್ಜಿಯನ್ನು ಅರ್ಜಿಯ ಜೊತೆ ನೀಡಿರುವ ವಿಳಾಸವಿರುವ ಲಕೋಟೆಯಲ್ಲಿಟ್ಟು ಸಾಧಾರಣ ಅಂಚೆ ಮುಖಾಂತರ ಮಾತ್ರ ಸಲ್ಲಿಸುವುದು. ಅರ್ಜಿಯ ಜೊತೆಗೆ ಯಾವುದೇ ಮೂಲ/ನಕಲು/ಜೆರಾಕ್ಸ್ ದಾಖಲಾತಿಗಳು, ಪ್ರಮಾಣ ಪತ್ರಗಳು, ಇತ್ಯಾದಿಗಳನ್ನು ಸಲ್ಲಿಸಬೇಕಾಗಿರುವುದಿಲ್ಲ. ಒಂದು ವೇಳೆ ಸಲ್ಲಿಸಿ, ಅವು ಕಳೆದು ಹೋದರೆ ಆಯ್ಕೆ ಪ್ರಾಧಿಕಾರವು ಜವಾಬ್ದಾರಿಯಾಗುವುದಿಲ್ಲ. ಆದರೆ ಅಭ್ಯರ್ಥಿಯು ನಿಗದಿತ ನಮೂನೆಯಲ್ಲಿರುವ ಅರ್ಜಿಯನ್ನು ಭರ್ತಿ ಮಾಡುವ ವೇಳೆಗೆ ಸಂಬಂಧಿಸಿದ ಪ್ರಾಧಿಕಾರಗಳಿಂದ ಅವಶ್ಯಕವಿರುವ ಎಲ್ಲಾ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಪಡೆದುಕೊಂಡು ಸದರಿ ಮೂಲ ದಾಖಲೆ/ಪ್ರಮಾಣ ಪತ್ರಗಳಲ್ಲಿರುವ ಮಾಹಿತಿಯನ್ನು ಸರಿಯಾಗಿ, ಸ್ಪಷ್ಟವಾಗಿ ಮತ್ತು ಸಮರ್ಪಕವಾಗಿ ನಿಗದಿತ ಅರ್ಜಿಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು. ಅರ್ಜಿ ನಮೂನೆ ಐಸಿಆರ್ ಕಂಪ್ಯೂಟರ್ ಕೋಡೆಡ್ ಆಗಿರುವುದರಿಂದ ಅರ್ಜಿಯನ್ನು ಮಡಚಿದಲ್ಲಿ/ಹರಿದಲ್ಲಿ/ಪಿನ್ ಅಥವಾ ಪಂಚ್ ಮಾಡಿದಲ್ಲಿ ಅರ್ಜಿಯು ತಿರಸ್ಕೃತವಾಗುವುದು. ಅರ್ಜಿಯನ್ನು ಒದಗಿಸಲಾಗಿರುವ ಲಕೋಟೆಯಲ್ಲಿ ಮಾತ್ರ ಸಲ್ಲಿಸತಕ್ಕದ್ದು. ಇತರೆ ನಮೂನೆಗಳಲ್ಲಿ ಅಥವಾ ಜೆರಾಕ್ಸ್ ಪ್ರತಿಗಳಲ್ಲಿ ಭರ್ತಿ ಮಾಡಿ ಸಲ್ಲಿಸುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ ಮತ್ತು ಆಯ್ಕೆಗೆ ಪರಿಗಣಿಸುವುದಿಲ್ಲ.

**6.0 ಅರ್ಜಿಗಳನ್ನು ಸಲ್ಲಿಸಬೇಕಾದ ವಿಳಾಸ**

ನಿಗದಿತ ನಮೂನೆಯಲ್ಲಿ ಭರ್ತಿ ಮಾಡಿದ ಅರ್ಜಿಗಳನ್ನು ಕಳುಹಿಸಬೇಕಾದ ವಿಳಾಸವಿರುವ ಲಕೋಟೆಯನ್ನು ಒದಗಿಸಲಾಗಿದ್ದು, ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಯನ್ನು ವಿಳಾಸವಿರುವ ಲಕೋಟೆಯಲ್ಲಿಟ್ಟು ಸಾಧಾರಣ ಅಂಚೆ ಮುಖಾಂತರ ಮಾತ್ರ ರವಾನಿಸತಕ್ಕದ್ದು. ಆದಾಗ್ಯೂ ಅರ್ಜಿಯನ್ನು ಕಳುಹಿಸಬೇಕಾದ ಪೋಸ್ಟ್ ಬಾಕ್ಸ್ ವಿಳಾಸ ಈ ಕೆಳಕಂಡಂತಿದೆ:–

**TO:**

**P. O. BOX No. 3864,**
**Bangalore – 560 038**

**ವಿಶೇಷ ಸೂಚನೆ:–** ಅರ್ಜಿ ತಲುಪಿದ ಬಗ್ಗೆ ಯಾವುದೇ ಸ್ವೀಕೃತಿಯನ್ನು ನೀಡಲಾಗುವುದಿಲ್ಲ.

**7.0 ಸ್ವೀಕೃತ ಅರ್ಜಿಗಳ ಪರಾಮರ್ಶೆ/ನೇಮಕಾತಿ ವಿಧಾನ**

ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮಗಳು, 2003ರ ಅನ್ವಯ ಅರಣ್ಯ ಇಲಾಖೆಯಲ್ಲಿ ಖಾಲಿ ಇರುವ ಒಟ್ಟು ಹುದ್ದೆಗಳನ್ನು ಪರಿಗಣನೆಗೆ ತೆಗೆದುಕೊಂಡು ಮತ್ತು ಸರ್ಕಾರವು ಪ್ರಸ್ತುತ ನೇರ ನೇಮಕಾತಿ ಮೂಲಕ ತುಂಬಲು ಅನುಮೋದನೆ ನೀಡಿರುವ ಹುದ್ದೆಗಳ ಸಂಖ್ಯೆಗನುಗುಣವಾಗಿ ಹಾಗೂ ಪ್ರಸ್ತುತ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಾನುಸಾರ ವನಪಾಲಕ ಹುದ್ದೆಗೆ ವೃತ್ತವಾರು ಮತ್ತು ಅರಣ್ಯ ರಕ್ಷಕ ಹುದ್ದೆಗೆ ವಿಭಾಗವಾರು ಮೀಸಲಾತಿ ವರ್ಗೀಕರಣ ಮಾಡಲಾಗಿದೆ. ಆಯಾ ಹುದ್ದೆಗೆ ಸ್ವೀಕರಿಸಲಾಗುವ ಎಲ್ಲಾ ಅರ್ಹ ಅರ್ಜಿಗಳನ್ನು ರಾಜ್ಯಮಟ್ಟದಲ್ಲಿ ಕ್ರೋಢೀಕರಿಸಿ, ನಿಗದಿತ ನಮೂನೆಯ ಅರ್ಜಿಯಲ್ಲಿ ಭರ್ತಿ ಮಾಡಿರುವ ಮಾಹಿತಿ/ವಿವರಗಳ ಆಧಾರದ ಅನ್ವಯ ಆಯಾ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಅಭ್ಯರ್ಥಿಗಳು ಗಳಿಸಿದ ಶೇಕಡವಾರು ಅಂಕಗಳ ಮೆರಿಟ್ ಆಧಾರದಲ್ಲಿ ಮೀಸಲಾತಿ ಪ್ರವರ್ಗವಾರು 1:20 (ಖಾಲಿ ಹುದ್ದೆ : ಅಭ್ಯರ್ಥಿ) ಅನುಪಾತದಲ್ಲಿ ಮೂಲ ದಾಖಲೆಗಳ ಪರಿಶೀಲನೆ, ದೇಹದಾರ್ಢ್ಯತೆ ಪರೀಕ್ಷೆ ಮತ್ತು ದೈಹಿಕ ತಾಳ್ವಿಕೆ ಪರೀಕ್ಷೆಗೆ ಹಾಜರಾಗಲು ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

1:20 (ಖಾಲಿ ಹುದ್ದೆ : ಅಭ್ಯರ್ಥಿ) ಅನುಪಾತದ ಪಟ್ಟಿಯನ್ನು ರಾಜ್ಯದಲ್ಲಿರುವ ಎಲ್ಲಾ ವೃತ್ತಗಳ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಪ್ರಾದೇಶಿಕ ಪರೀಕ್ಷಕರು ಇವರ ಕಚೇರಿಗಳಲ್ಲಿ ಹಾಗೂ ಇಲಾಖಾ ವೆಬ್‌ಸೈಟ್: **www.karnatakaforest.gov.in** ನಲ್ಲಿ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಪಡಿಸಲಾಗುವುದು.

**ವಿಶೇಷ ಸೂಚನೆ:–** ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕುವಾಗ ಪಠ್ಯ ವಿಷಯದಲ್ಲಿನ ಯಾವುದೇ ವಿಷಯದ ಅಂಕಗಳನ್ನು ಹೊರತುಪಡಿಸಲಾಗುವುದಿಲ್ಲ. ನಿಗದಿಪಡಿಸಿರುವ ವಿದ್ಯಾರ್ಹತೆಯಲ್ಲಿ ಅಭ್ಯರ್ಥಿಯು ಗಳಿಸಿರುವ ಎಲ್ಲಾ ವಿಷಯಗಳಲ್ಲಿನ ಒಟ್ಟು ಅಂಕಗಳು ಮತ್ತು ಆಯಾ ಪರೀಕ್ಷಾ ಮಂಡಳಿ ನಿಗದಿಪಡಿಸಿರುವ ಗರಿಷ್ಠ ಅಂಕಗಳನ್ನು ಪರಿಗಣಿಸಿ ಅಭ್ಯರ್ಥಿಗಳ ಶೇಕಡವಾರು ಅಂಕಗಳನ್ನು ನಿಗದಿಪಡಿಸಲಾಗುವುದು.

1:20 (ಖಾಲಿ ಹುದ್ದೆ : ಅಭ್ಯರ್ಥಿ) ಅನುಪಾತದ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ ಮತ್ತು ದೈಹಿಕ ತಾಳ್ವಿಕೆ ಪರೀಕ್ಷೆಗಳಿಗೆ ಸೂಚಿತ ದಿನಾಂಕದಂದು ಹಾಜರಾಗಲು ತಿಳಿಸಲಾಗುವುದು.

ಸದರಿ ಸೂಚಿತ ದಿನಾಂಕದಂದು ಅರ್ಹ ಅಭ್ಯರ್ಥಿಗಳು ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಂಬಂಧಿಸಿದ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಪ್ರಾದೇಶಿಕ ಪರೀಕ್ಷಕರ ಎದುರು ಹಾಜರುಪಡಿಸಬೇಕು. ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆಯಲ್ಲಿ ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ/ವಿವರಗಳಿಗೆ ಪೂರಕ ಮತ್ತು ಸರಿಯಾದ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಹಾಜರುಪಡಿಸಿದ ಅಭ್ಯರ್ಥಿಗಳು ಮಾತ್ರ ಶಾರೀರಿಕ ಮಾನದಂಡದ ಕುರಿತು ನಿಗದಿಪಡಿಸಿದ ದೇಹದಾರ್ಢ್ಯತೆ ಪರೀಕ್ಷೆಗೆ ಅರ್ಹತೆ ಹೊಂದುತ್ತಾರೆ. ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದವರು ಮಾತ್ರ ಮುಂದಿನ ಹಂತದ ದೈಹಿಕ ತಾಳ್ವಿಕೆ ಪರೀಕ್ಷೆಗೆ ಅರ್ಹತೆ ಹೊಂದುತ್ತಾರೆ. ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿಗಳು ಮಾತ್ರ ನಿಗದಿಪಡಿಸಿರುವ ಲಿಖಿತ Aptitude ಪರೀಕ್ಷೆಗೆ ಹಾಜರಾಗಲು ಅರ್ಹರಾಗುತ್ತಾರೆ.

ನೇಮಕಾತಿಗಾಗಿ ಇಲಾಖೆಯು ನಡೆಸುವ ಲಿಖಿತ Aptitude ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಪಡೆದ ಒಟ್ಟು ಅಂಕಗಳ ಶೇಕಡಾವಾರು ಪ್ರಮಾಣದ ಅರ್ಧ ಭಾಗ ಹಾಗೂ ವನಪಾಲಕ/ಅರಣ್ಯ ರಕ್ಷಕ ಹುದ್ದೆಗೆ ನಿಗದಿಪಡಿಸಿದ ಶೈಕ್ಷಣಿಕ ವಿದ್ಯಾರ್ಹತೆಯಲ್ಲಿ ಅಭ್ಯರ್ಥಿಗಳು ಪಡೆದ ಒಟ್ಟು ಅಂಕಗಳ ಶೇಕಡಾವಾರು ಪ್ರಮಾಣದ ಅರ್ಧ ಭಾಗವನ್ನು ಕ್ರೋಢೀಕರಿಸಿ ಎಲ್ಲಾ ಅಭ್ಯರ್ಥಿಗಳ ಮೆರಿಟ್ ಅನ್ನು ರಾಜ್ಯಮಟ್ಟದಲ್ಲಿ ನಿಗದಿಪಡಿಸಲಾಗುವುದು. ಮೆರಿಟ್ ಆಧಾರದಲ್ಲಿ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಅನ್ವಯ ಅಭ್ಯರ್ಥಿಗಳನ್ನು ನೇಮಕಾತಿಗಾಗಿ ಆಯಾ ಹುದ್ದೆಗೆ ಆಯ್ಕೆ ಮಾಡಲಾಗುವುದು.

ಅಂತಿಮವಾಗಿ ವನಪಾಲಕ ಹುದ್ದೆಗೆ ಆಯ್ಕೆಯಾದ 218 ಅಭ್ಯರ್ಥಿಗಳ ಪೈಕಿ 18 ಅಭ್ಯರ್ಥಿಗಳನ್ನು ಮತ್ತು ಅರಣ್ಯ ರಕ್ಷಕ ಹುದ್ದೆಗೆ ಆಯ್ಕೆಯಾದ 863 ಅಭ್ಯರ್ಥಿಗಳ ಪೈಕಿ 63 ಅಭ್ಯರ್ಥಿಗಳನ್ನು STPF ಗೆ ಕರ್ತವ್ಯ ನಿರ್ವಹಿಸಲು ನೇಮಕ ಮಾಡಲಾಗುವುದು.

**8.0 ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ ಮತ್ತು ಲಿಖಿತ ಪರೀಕ್ಷೆಗಳು**

ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ ಮತ್ತು ಲಿಖಿತ ಪರೀಕ್ಷೆಗಳನ್ನು ಸಂಬಂಧಿಸಿದ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಪ್ರಾದೇಶಿಕ ಪರೀಕ್ಷಕರಿಂದ ಸಂಬಂಧಿಸಿದ ಪರೀಕ್ಷಾ ಕೇಂದ್ರಗಳಲ್ಲಿ ಸೂಚಿತ ದಿನಾಂಕಗಳಂದು ನಡೆಸಲಾಗುವುದು.

**8.1.1 ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ.**

1:20 (ಖಾಲಿ ಹುದ್ದೆ : ಅಭ್ಯರ್ಥಿ) ಅನುಪಾತದ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿ/ವಿವರಗಳಿಗೆ ಪೂರಕವಾಗಿ ವಯಸ್ಸು, (ಜನ್ಮ ದಿನಾಂಕ ತಿಳಿಯಲು ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ಶಾಲಾ ದಾಖಲಾತಿ ಪ್ರಮಾಣ ಪತ್ರಗಳು) ಶೈಕ್ಷಣಿಕ ಅರ್ಹತೆ, ಮೀಸಲಾತಿ, ಇತ್ಯಾದಿ ಬಗ್ಗೆ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಸೂಚಿತ ದಿನಾಂಕದಂದು ಸಂಬಂಧಿಸಿದ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಪ್ರಾದೇಶಿಕ ಪರೀಕ್ಷಕರ ಎದುರು ಪರಿಶೀಲನೆಗೆ ಕಡ್ಡಾಯವಾಗಿ ಹಾಜರುಪಡಿಸಬೇಕು. ಸದರಿ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಹಾಜರುಪಡಿಸಲು ಯಾವುದೇ ಕಾರಣಕ್ಕೂ ಮತ್ತು ಯಾವುದೇ ಸನ್ನಿವೇಶದಲ್ಲಿಯೂ ಕಾಲ ವಿಸ್ತರಣೆ ನೀಡಲಾಗುವುದಿಲ್ಲ. ಅಭ್ಯರ್ಥಿಯು ತನ್ನ ಅರ್ಜಿ ನಮೂನೆಯಲ್ಲಿ ನಮೂದಿಸಿರುವ ಮಾಹಿತಿ/ವಿವರಗಳನ್ನು ನಿಯಮಾನುಸಾರ ಪರಿಗಣಿಸಲಾಗುವುದು. ಒಂದು ವೇಳೆ ನಮೂದಿಸಿರುವ ಮಾಹಿತಿಗೆ ವ್ಯತಿರಿಕ್ತ ದಾಖಲೆ/ಪ್ರಮಾಣ ಪತ್ರಗಳನ್ನು ಸಲ್ಲಿಸಿದಲ್ಲಿ ಅಂತಹ ದಾಖಲೆ/ಪ್ರಮಾಣ ಪತ್ರಗಳನ್ನು ಪರಿಗಣನೆಗೆ ತೆಗೆದುಕೊಂಡು ಬದಲಾವಣೆ ಮಾಡಲಾಗುವುದಿಲ್ಲ. ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸದ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು ಹಾಗೂ ಅವರನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**8.1.2** ಅಭ್ಯರ್ಥಿಯು ಅರ್ಜಿಯನ್ನು ಭರ್ತಿ ಮಾಡುವಾಗ ಆಯಾ ಹುದ್ದೆಗೆ ನಿಗದಿಪಡಿಸಿರುವ ಶೈಕ್ಷಣಿಕ ವಿದ್ಯಾರ್ಹತೆಯಲ್ಲಿ ಆಯಾ ಪರೀಕ್ಷಾ ಮಂಡಳಿ ನಿಗದಿಪಡಿಸಿರುವ ಗರಿಷ್ಠ ಅಂಕಗಳನ್ನು ಹಾಗೂ ಅಭ್ಯರ್ಥಿಯು ಎಲ್ಲಾ ವಿಷಯಗಳಲ್ಲಿ ಗಳಿಸಿರುವ ಒಟ್ಟು ಅಂಕಗಳನ್ನು ತನ್ನ ಅರ್ಜಿಯಲ್ಲಿ ಸರಿಯಾಗಿ ಮತ್ತು ಸ್ಪಷ್ಟವಾಗಿ ನಮೂದಿಸುವುದು. ಅಸ್ಪಷ್ಟ/ತಪ್ಪು/ಅಪೂರ್ಣ ಮಾಹಿತಿ ನೀಡಿದ್ದಲ್ಲಿ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು ಹಾಗೂ ಅವರನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**8.1.3** ಅಭ್ಯರ್ಥಿಯು ಅರ್ಜಿ ನಮೂನೆಯಲ್ಲಿ ಮೀಸಲಾತಿ ಮತ್ತು ಕೋರುವ ಯಾವುದೇ ಸೌಲಭ್ಯಗಳಿಗೆ ಸಂಬಂಧಿಸಿದಂತೆ ವಿವರಗಳನ್ನು ಅರ್ಜಿಯಲ್ಲಿ ನೀಡಿರುವ ಸಂಬಂಧಿಸಿದ ಕಾಲಂಗಳಲ್ಲಿ ತಪ್ಪದೇ ನಮೂದಿಸಬೇಕು. ಒಂದು ವೇಳೆ ಸದರಿ ವಿವರಗಳನ್ನು ಅರ್ಜಿಯಲ್ಲಿ ನಮೂದಿಸದಿದ್ದರೆ ಅಂತಹ ಅಭ್ಯರ್ಥಿಯು ಮೀಸಲಾತಿ/ಕೋರುವ ಇತರೆ ಸೌಲಭ್ಯಗಳಿಂದ ವಂಚಿತರಾಗುತ್ತಾರೆ.

**8.2 ದೇಹದಾರ್ಢ್ಯತೆ ಪರೀಕ್ಷೆ**

**ಶಾರೀರಿಕ ಮಾನದಂಡಗಳು (Physical Standards):** ಶಾರೀರಿಕ ಮಾನದಂಡಗಳನ್ನು ಈ ಕೆಳಗಿನಂತೆ ನಿಗದಿಪಡಿಸಲಾಗಿದೆ.

| | | |
|---|---|---|
| **ಪುರುಷ ಅಭ್ಯರ್ಥಿಗಳಿಗೆ:** | | |
| 1 | ಎತ್ತರ | ಕನಿಷ್ಠ 163 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 79 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |
| **ಮಹಿಳಾ ಅಭ್ಯರ್ಥಿಗಳಿಗೆ:** | | |
| 1 | ಎತ್ತರ | ಕನಿಷ್ಠ 150 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 74 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |

ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹರಾಗುವ ಅಭ್ಯರ್ಥಿಗಳನ್ನು ಮಾತ್ರ ಮುಂದಿನ ಹಂತದ ದೈಹಿಕ ತಾಳ್ವಿಕೆ ಪರೀಕ್ಷೆಗೆ ಪರಿಗಣಿಸಲಾಗುವುದು. ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅನರ್ಹರಾದ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**8.3 ದೈಹಿಕ ತಾಳ್ವಿಕೆ ಪರೀಕ್ಷೆ (Physical Endurance Test)**

| | |
|---|---|
| ಪುರುಷ ಅಭ್ಯರ್ಥಿಗಳಿಗೆ : | 25 ಕಿ.ಮೀ. ಕಾಲು ನಡಿಗೆ ಗರಿಷ್ಠ 4 ಗಂಟೆಗಳ ಅವಧಿಯಲ್ಲಿ ಪೂರೈಸಬೇಕು |
| ಮಹಿಳಾ ಅಭ್ಯರ್ಥಿಗಳಿಗೆ : | 14 ಕಿ.ಮೀ. ಕಾಲು ನಡಿಗೆ ಗರಿಷ್ಠ 4 ಗಂಟೆಗಳ ಅವಧಿಯಲ್ಲಿ ಪೂರೈಸಬೇಕು. |

ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿಗಳು ಮಾತ್ರ ಮುಂದಿನ ಹಂತದ ಲಿಖಿತ Aptitude ಪರೀಕ್ಷೆಗೆ ಹಾಜರಾಗಲು ಅರ್ಹತೆ ಪಡೆಯುತ್ತಾರೆ. ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅನರ್ಹರಾದ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**ವಿಶೇಷ ಸೂಚನೆ:–** 1:20 (ಖಾಲಿ ಹುದ್ದೆ : ಅಭ್ಯರ್ಥಿ) ಅನುಪಾತದ ಪಟ್ಟಿಯಲ್ಲಿ ಇರುವ ಅಭ್ಯರ್ಥಿಗಳಿಗೆ ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ ಮತ್ತು ಲಿಖಿತ ಪರೀಕ್ಷೆಗಳಿಗೆ ಹಾಜರಾಗಲು ತಿಳಿಸುವ ಪ್ರವೇಶ ಪತ್ರವನ್ನು ಅಂಚೆಯ ಮೂಲಕ ಕಳುಹಿಸಲಾಗುವುದು. ಈ ಪ್ರವೇಶ ಪತ್ರದಲ್ಲಿ ಪರೀಕ್ಷಾ ಕೇಂದ್ರದ ವಿವರ, ದಿನಾಂಕ, ಸಮಯ, ಇತ್ಯಾದಿ ವಿವರಗಳು ಇರುತ್ತದೆ.

**8.4 ಲಿಖಿತ Aptitude ಪರೀಕ್ಷೆ**

ವನಪಾಲಕ ಮತ್ತು ಅರಣ್ಯ ರಕ್ಷಕ ಹುದ್ದೆಗಳಿಗೆ ಲಿಖಿತ Aptitude ಪರೀಕ್ಷೆಗಳನ್ನು ಹುದ್ದೆವಾರು ಪ್ರತ್ಯೇಕವಾಗಿ ನಡೆಸಲಾಗುವುದು. ಪ್ರಶ್ನೆ ಪತ್ರಿಕೆಯು ಆಯಾ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯ ಮಟ್ಟದಲ್ಲಿದ್ದು **ಬಹು ಆಯ್ಕೆ** (objective multiple choice) ಮಾದರಿಯದ್ದಾಗಿರುತ್ತದೆ. ಲಿಖಿತ Aptitude ಪರೀಕ್ಷೆಯ ಪ್ರಶ್ನೆ ಪತ್ರಿಕೆಯು ನೂರು (100) ಅಂಕಗಳದ್ದಾಗಿದ್ದು, ನೂರು (100) ನಿಮಿಷಗಳ ಅವಧಿಯಲ್ಲಿ ಉತ್ತರಿಸಬೇಕಾಗಿದೆ.

**8.4.1 ಲಿಖಿತ ಪರೀಕ್ಷೆಯ ವಿಷಯಗಳು**

| | |
|---|---|
| **ಗಣಿತ (Mathematics) 40 ಅಂಕಗಳಿಗೆ** | **ವನಪಾಲಕ ಹುದ್ದೆಗೆ / Forester**<br>ಪಿ.ಯು.ಸಿ. / 12ನೇ ತರಗತಿ ಮಟ್ಟದಲ್ಲಿ. **PUC / 12th Standard level.** |
| | **ಅರಣ್ಯ ರಕ್ಷಕ ಹುದ್ದೆಗೆ / Forest Guard**<br>ಎಸ್.ಎಸ್.ಎಲ್.ಸಿ. / 10ನೇ ತರಗತಿ ಮಟ್ಟದಲ್ಲಿ. **SSLC / 10th Standard level.** |

| | | |
|---|---|---|
| **ಸಾಮಾನ್ಯ ಜ್ಞಾನ** (General Knowledge), **60 ಅಂಕಗಳಿಗೆ** | **ವನಪಾಲಕ ಹುದ್ದೆಗೆ /** Forester ಪಿ.ಯು.ಸಿ./12 ನೇ ತರಗತಿ ಮಟ್ಟದಲ್ಲಿ. PUC / 12th Standard level | **ಅರಣ್ಯ ರಕ್ಷಕ ಹಾಗೂ ವನಪಾಲಕ ಹುದ್ದೆಗಳಿಗೆ ಸೇರಿದಂತೆ (ಸಾಮಾನ್ಯ ಪಠ್ಯಕ್ರಮ)** (Common syllabus) ಭಾರತದ ಪ್ರಾಚೀನ ನಾಗರಿಕತೆಗಳು (Indian civilization), ಇತಿಹಾಸ (History), ಭಾರತದ ಸ್ವಾತಂತ್ರ್ಯ ಹೋರಾಟ (Indian Independence movement), ಭಾರತದ ಸಂವಿಧಾನ (Indian Constitution), ಭಾರತದ ರಾಜನೀತಿ (Indian Polity), ಭಾರತದ ಅರ್ಥನೀತಿ (Indian Economy), ಭೂಗೋಳ ಮತ್ತು ನೈಸರ್ಗಿಕ ಸಂಪನ್ಮೂಲಗಳು (Geography & Natural Resources), ವಿಜ್ಞಾನ ಮತ್ತು ತಂತ್ರಜಾನ (Science & Technology), ಕಲೆ ಮತ್ತು ಸಂಸ್ಕೃತಿ (Art & Culture), ಮೂಲಭೂತ ಸೌಕರ್ಯಗಳ ಅಭಿವೃದ್ಧಿ (Infrastructural development), ಪ್ರಚಲಿತ ವಿದ್ಯಮಾನಗಳು (Current affairs), ಹಾಗೂ ಕ್ರೀಡೆ (Sports). |
| | **ಅರಣ್ಯ ರಕ್ಷಕ ಹುದ್ದೆಗೆ / Forest Guard** ಎಸ್.ಎಸ್.ಎಲ್.ಸಿ./10ನೇ ತರಗತಿ ಮಟ್ಟದಲ್ಲಿ. **SSLC / 10th Standard level** | |

**8.4.2 ಲಿಖಿತ Aptitude ಪರೀಕ್ಷಾ ಕೇಂದ್ರ:** ಲಿಖಿತ Aptitude ಪರೀಕ್ಷೆಗಳನ್ನು ಈ ಕೆಳಕಂಡ ಪರೀಕ್ಷಾ ಕೇಂದ್ರಗಳಲ್ಲಿ ನಡೆಸಲಾಗುವುದು. ಇಚ್ಛಿತ ಪರೀಕ್ಷಾ ಕೇಂದ್ರದ ವಿವರವನ್ನು ಅಭ್ಯರ್ಥಿಯು ಅರ್ಜಿಯ ಸೂಕ್ತ ಕಾಲಂನಲ್ಲಿ ನಮೂದಿಸುವುದು. ಈ ರೀತಿ ನಮೂದಿಸಿರುವ ಪರೀಕ್ಷಾ ಕೇಂದ್ರವನ್ನು ಯಾವುದೇ ಹಂತದಲ್ಲಿಯೂ ಯಾವುದೇ ಕಾರಣಕ್ಕೂ ಬದಲಾವಣೆ ಮಾಡಲು ಅವಕಾಶ ನೀಡಲಾಗುವುದಿಲ್ಲ.

1) ಬೆಂಗಳೂರು, 2) ಬಳ್ಳಾರಿ, 3) ಬೆಳಗಾವಿ, 4) ಹಾಸನ, 5) ಮೈಸೂರು, 6) ಗುಲ್ಬರ್ಗಾ 7) ಮಡಿಕೇರಿ, 8) ಶಿವಮೊಗ್ಗ, 9) ಮಂಗಳೂರು, 10) ಶಿರಸಿ, 11) ಧಾರವಾಡ, 12) ಚಿಕ್ಕಮಗಳೂರು, 13) ಚಾಮರಾಜನಗರ.

ಪರೀಕ್ಷಾ ಕೇಂದ್ರಗಳ ಕೋಡ್ ನಂಬರ್ ವಿವರಗಳನ್ನು ಅಭ್ಯರ್ಥಿಗಳ ಸೂಚನಾ ಪುಸ್ತಕದಲ್ಲಿ ನೀಡಲಾಗಿದೆ. ಇದರನ್ವಯ ಇಚ್ಛಿತ ಪರೀಕ್ಷಾ ಕೇಂದ್ರದ ಕೋಡ್ ನಂಬರನ್ನು ಅರ್ಜಿಯ ಸೂಕ್ತ ಕಾಲಂನಲ್ಲಿ ನಮೂದಿಸುವುದು.

**ವಿಶೇಷ ಸೂಚನೆಗಳು:–**

**(1)** ವನಪಾಲಕ ಹಾಗೂ ಅರಣ್ಯ ರಕ್ಷಕ ಹುದ್ದೆಗೆ ಲಿಖಿತ Aptitude ಪರೀಕ್ಷೆಯನ್ನು ಇಡೀ ರಾಜ್ಯದ ಹದಿಮೂರು (13) ಪರೀಕ್ಷಾ ಕೇಂದ್ರಗಳಲ್ಲಿ ಒಂದೇ ದಿನಾಂಕದಂದು (ಪೂರ್ವಾಹ್ನದಲ್ಲಿ ವನಪಾಲಕ ಹುದ್ದೆಗೆ ಪರೀಕ್ಷೆ ಮತ್ತು ಅಪರಾಹ್ನ ಅರಣ್ಯ ರಕ್ಷಕ ಹುದ್ದೆಗೆ) ನಡೆಸಲಾಗುವುದು.

**(2)** ಆದ ಪ್ರಯುಕ್ತ ವನಪಾಲಕ ಮತ್ತು ಅರಣ್ಯ ರಕ್ಷಕ ಈ ಎರಡೂ ಹುದ್ದೆಗಳಿಗೆ ಅರ್ಜಿ ಹಾಕುವ ಅಭ್ಯರ್ಥಿಗಳು ಆಯಾ ಹುದ್ದೆಗಳ ಲಿಖಿತ Aptitude ಪರೀಕ್ಷೆಯನ್ನು ಬರೆಯಲು ಒಂದೇ ಪರೀಕ್ಷಾ ಕೇಂದ್ರವನ್ನು ಆಯ್ಕೆ ಮಾಡುವುದು.

**(3)** ಅಭ್ಯರ್ಥಿಗಳು ನೇಮಕಾತಿ ಪರೀಕ್ಷೆಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

**8.4.3 ಲಿಖಿತ Aptitude ಪರೀಕ್ಷೆ ಬರೆಯುವ ಭಾಷೆ**

ಲಿಖಿತ Aptitude ಪರೀಕ್ಷೆ ಬರೆಯಲು ಅಭ್ಯರ್ಥಿಗಳು ಕನ್ನಡ ಅಥವಾ ಆಂಗ್ಲ ಭಾಷೆಯನ್ನು ಆಯ್ದುಕೊಳ್ಳಬಹುದಾಗಿದೆ. ಅಭ್ಯರ್ಥಿಯು ಆಯ್ದುಕೊಂಡ ಪರೀಕ್ಷೆ ಬರೆಯುವ ಭಾಷೆಯನ್ನು ಅರ್ಜಿಯ ಸಂಬಂಧಿಸಿದ ಕಾಲಂನಲ್ಲಿ ತಪ್ಪದೆ ನಮೂದಿಸಬೇಕು. ಅಭ್ಯರ್ಥಿಯು ಅರ್ಜಿಯಲ್ಲಿ ಒಂದು ಸಾರಿ ನಮೂದಿಸಿರುವ ಲಿಖಿತ Aptitude ಪರೀಕ್ಷೆ ಬರೆಯುವ ಭಾಷೆಯನ್ನು ಯಾವುದೇ ಕಾರಣಕ್ಕೂ ಯಾವುದೇ ಹಂತದಲ್ಲಿಯೂ ಬದಲಾವಣೆ ಮಾಡಲು ಅವಕಾಶವಿರುವುದಿಲ್ಲ.

**8.5** ಎಸ್.ಎಸ್.ಎಲ್.ಸಿ. ಹಾಗೂ ಅದಕ್ಕಿಂತ ಮೇಲ್ಪಟ್ಟ ವಿದ್ಯಾಭ್ಯಾಸದಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಭ್ಯಸಿಸದೇ ಇರುವ ಅಭ್ಯರ್ಥಿಗಳಿಗೆ ಕರ್ನಾಟಕ ಸಿವಿಲ್ ಸೇವೆಗಳು (ನೇಮಕಾತಿ) (ಕನ್ನಡ ಭಾಷಾ ಪರೀಕ್ಷೆ) ನಿಯಮಗಳು, 1984ಕ್ಕೆ ಪೂರಕವಾಗಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 69 ಎಸ್‌ಸಿಆರ್ 84 ದಿನಾಂಕ 23–9–1985 ರಲ್ಲಿ ಸೂಚಿಸಿದ ಪ್ರಕಾರ ಅಂತಹ ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನವನ್ನು ಪರೀಕ್ಷಿಸಲು ನಿಗದಿಪಡಿಸಿದ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರವೇ ಅಭ್ಯರ್ಥಿಗಳು ನೇಮಕಾತಿ ಹೊಂದಲು ಅರ್ಹರಾಗುತ್ತಾರೆ. ಕನ್ನಡ ಭಾಷಾ ಪರೀಕ್ಷೆಯಲ್ಲಿ ಅನುತ್ತೀರ್ಣರಾಗುವ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**8.6 ಕನ್ನಡ ಭಾಷಾ ಪರೀಕ್ಷೆಯ ಪಠ್ಯಕ್ರಮ**

**8.6.1** ಕನ್ನಡ ಭಾಷಾ ಪರೀಕ್ಷೆಯನ್ನು ಎರಡು ಹಂತದಲ್ಲಿ ನಡೆಸಲಾಗುತ್ತದೆ. ಇದರ ವಿವರ ಕೆಳಗೆ ನಮೂದಿಸಿದೆ.

ಸಮಯ: 1.00 ಗಂಟೆ

| | | |
|---|---|---|
| ಮೊದಲನೇ ಹಂತ – ಲಿಖಿತ ಪರೀಕ್ಷೆ: | ಲಿಖಿತ ಪರೀಕ್ಷೆಗೆ ಕನ್ನಡ ಶಾಲಾ ನಾಲ್ಕನೇ ತರಗತಿಯ ಕನ್ನಡ ಮುಖ್ಯ ಪಠ್ಯಪುಸ್ತಕ ಹಾಗೂ ವಿವಿಧ ಲೇಖಕರು ಬರೆದ ಕರ್ನಾಟಕ ವಯಸ್ಕರ ಶಿಕ್ಷಣ ಪರಿಷತ್ತು ಪ್ರಕಟಿಸಿರುವ "ಸತ್ಯಕ್ಕೆ ಬೆಲೆ ಕೊಟ್ಟ ಗೆಳೆಯರು" ಎಂಬ ಪಾಠದಿಂದ ಆರಂಭವಾಗುವ ಸಣ್ಣಕಥೆಗಳು ಇವುಗಳಿಂದ ಪ್ರಶ್ನೆಗಳನ್ನು ಕೊಡಲಾಗುವುದು. | 90 ಅಂಕಗಳು |
| ಎರಡನೇ ಹಂತ – ಮೌಖಿಕ ಪರೀಕ್ಷೆ: | ಅ) ಮುದ್ರಿತ ಹಾಗೂ ಹಸ್ತ ಪ್ರತಿಗಳನ್ನು ಓದುವುದು.<br>ಆ) ಅರ್ಜಿಗಳನ್ನು ಓದಿ ವಿವರಿಸುವುದು.<br>ಇ) ಸಂಭಾಷಣೆ ನಡೆಸುವುದು. | 10 ಅಂಕಗಳು |

**8.6.2** ಈ ಕೆಳಗಿನ ಮಟ್ಟದಲ್ಲಿ ಮೂರು ವಿಧದಲ್ಲಿ ಕನಿಷ್ಠ ಅಂಕಗಳನ್ನು ಪಡೆದವರು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವವರೆಂದು ಪರಿಗಣಿಸಲಾಗುವುದು.

| | | |
|---|---|---|
| (ಅ) | ಲಿಖಿತ ಪರೀಕ್ಷೆಯಲ್ಲಿ ಪಡೆಯತಕ್ಕ ಕನಿಷ್ಠ ಅಂಕಗಳು: | 30 |
| (ಆ) | ಮೌಖಿಕ ಪರೀಕ್ಷೆಯಲ್ಲಿ ಪಡೆಯತಕ್ಕ ಕನಿಷ್ಠ ಅಂಕಗಳು: | 3 |
| (ಇ) | ಲಿಖಿತ ಪರೀಕ್ಷೆಯಲ್ಲಿ ಮತ್ತು ಮೌಖಿಕ ಪರೀಕ್ಷೆಯಲ್ಲಿ ಒಟ್ಟಿಗೆ ಪಡೆಯತಕ್ಕ ಕನಿಷ್ಠ ಅಂಕಗಳು: | 35 |

**8.7 Medical Fitness**

ನಿಗದಿಪಡಿಸಿದ ಹುದ್ದೆಗಳಿಗೆ ತಾತ್ಕಾಲಿಕವಾಗಿ ಆಯ್ಕೆಯಾದ ಅಭ್ಯರ್ಥಿಗಳ Medical Fitness ಪರೀಕ್ಷೆಯನ್ನು ಜಿಲ್ಲಾ ಸರ್ಕಾರಿ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ Civil Surgeon/Chief Medical Officer/Medical Superintendent ರವರ ದರ್ಜೆಗಿಂತ ಕಡಿಮೆ ಇರದ ವೈದ್ಯಾಧಿಕಾರಿಗಳಿಂದ ಈ ಕೆಳಕಂಡ Medical Fitness ಪರೀಕ್ಷೆಗಳನ್ನು ಇಲಾಖಾ ಮುಖಾಂತರ ನಡೆಸಲಾಗುವುದು. ಇದಕ್ಕೆ ಹೊರತಾಗಿ ಯಾವುದೇ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಲಾಗುವುದಿಲ್ಲ. ಹೀಗೆ ನಡೆಸುವ Medical Fitness ಪರೀಕ್ಷೆಯಲ್ಲಿ ಅನರ್ಹಗೊಂಡ ಅಭ್ಯರ್ಥಿಗಳನ್ನು ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು. Medical Fitness ಪರೀಕ್ಷೆಯಲ್ಲಿ ಅನರ್ಹಗೊಂಡ ಅಭ್ಯರ್ಥಿಗಳಿಗೆ ಯಾವುದೇ ಕಾರಣಕ್ಕೂ ಎರಡನೇ ಬಾರಿ Medical Fitness ಪರೀಕ್ಷೆಗೆ ಅವಕಾಶ ನೀಡಲಾಗುವುದಿಲ್ಲ ಹಾಗೂ ಸೂಚಿತ ದಿನಾಂಕದಂದು ನಡೆಸುವ Medical Fitness ಪರೀಕ್ಷೆಗೆ ಗೈರುಹಾಜರಾಗುವ ಅಭ್ಯರ್ಥಿಗಳಿಗೆ ಯಾವುದೇ ಕಾರಣಕ್ಕೂ ಯಾವುದೇ ಸಂದರ್ಭದಲ್ಲಿಯೂ ಎರಡನೇ ಬಾರಿ Medical Fitness ಪರೀಕ್ಷೆಯನ್ನು ನಡೆಸಲು ಅವಕಾಶವನ್ನು ನೀಡಲಾಗುವುದಿಲ್ಲ. Medical Fitness ಪರೀಕ್ಷೆಯಲ್ಲಿ ಅರ್ಹರಾಗುವ ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಿ ಸ್ಥಳ ಹಂಚಿಕೆ ನೀಡಲಾಗುವುದು. Medical Fitness ಪರೀಕ್ಷೆಗಳು ಈ ಕೆಳಕಂಡಂತಿರುತ್ತವೆ.

**8.7.1 ಶಾರೀರಿಕ ಮಾನದಂಡಗಳು (Physical Standards)**

**ಈ ಕೆಳಗಿನಂತೆ** ಶಾರೀರಿಕ ಮಾನದಂಡಗಳ ಕುರಿತು ಪರೀಕ್ಷೆಯನ್ನು ನಡೆಸಲಾಗುವುದು.

| **ಪುರುಷ ಅಭ್ಯರ್ಥಿಗಳಿಗೆ** | | |
|---|---|---|
| 1 | ಎತ್ತರ | ಕನಿಷ್ಠ 163 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 79 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |
| **ಮಹಿಳಾ ಅಭ್ಯರ್ಥಿಗಳಿಗೆ** | | |
| 1 | ಎತ್ತರ | ಕನಿಷ್ಠ 150 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 74 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |

**8.7.2 ದೃಷ್ಟಿ ಸಾಮರ್ಥ್ಯ**

ಅಭ್ಯರ್ಥಿಗಳು ಈ ಕೆಳಗೆ ನಿಗದಿಪಡಿಸಿರುವ ದೃಷ್ಟಿ ಸಾಮರ್ಥ್ಯವನ್ನು ಕನ್ನಡಕ ಸಹಿತ ಅಥವಾ ಕನ್ನಡಕ ರಹಿತ ಕಡ್ಡಾಯವಾಗಿ ಹೊಂದಿರಬೇಕು ಹಾಗೂ ದೃಷ್ಟಿ ಸಾಮರ್ಥ್ಯ ಕುರಿತು ಈ ಕೆಳಕಂಡ ವೈದ್ಯಕೀಯ ಪರೀಕ್ಷೆಗಳನ್ನು ನಡೆಸಲಾಗುವುದು.

| ದೂರ ದೃಷ್ಟಿ (Distant vision) | | ಸಮೀಪ ದೃಷ್ಟಿ (Near vision) | |
|---|---|---|---|
| ದೋಷರಹಿತ ಕಣ್ಣು (Better eye) | ದೋಷಪೂರಿತ ಕಣ್ಣು (Worse eye) | ದೋಷರಹಿತ ಕಣ್ಣು (Better eye) | ದೋಷಪೂರಿತ ಕಣ್ಣು (Worse eye) |
| 6/6 ಮೀಟರ್ | 6/9 ಮೀಟರ್ | 0/6 ಮೀಟರ್ | 0/8 ಮೀಟರ್ |

ಪ್ರತಿ ಕಣ್ಣು ಸಂಪೂರ್ಣ ದೃಷ್ಟಿ ಹೊಂದಿರಬೇಕು. ವರ್ಣಾಂಧತೆ, ಮೆಳ್ಳೆಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು.

**8.7.3 ಶ್ರವಣಶಕ್ತಿ**

ಅಭ್ಯರ್ಥಿಗಳ ಶ್ರವಣ ಶಕ್ತಿಯನ್ನು ಪರೀಕ್ಷಿಸಲು ಈ ಕೆಳಕಂಡ ವೈದ್ಯಕೀಯ ಪರೀಕ್ಷೆಗಳನ್ನು ನಡೆಸಲಾಗುವುದು.

1. ರಿನ್ನರ್ಸ್ ಟೆಸ್ಟ್
2. ವೆಬ್ಬರ್ಸ್ ಟೆಸ್ಟ್
3. ಟೆಸ್ಟ್ ಫಾರ್ ವರ್ಟಿಗೋ

ಮೇಲಿನ ಪರೀಕ್ಷೆಗಳಲ್ಲಿ ಯಾವುದಾದರೂ ಶ್ರವಣ ದೋಷವಿದೆಯೆಂದು ಕಂಡುಬಂದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಗೆ ಅನರ್ಹರಾಗುತ್ತಾರೆ.

**8.7.4 ಕೆಳಕಂಡ ಅಂಗವಿಕಲತೆ (Physical disqualifactions) ಇರುವವರು ಆಯ್ಕೆಗೆ ಅನರ್ಹರು.**

1. ತಾಗು ಮಂಡಿಗಳು (knock knees)
2. ಬಾಗಿದ ಕಾಲುಗಳು (Bow legs)
3. ಚಪ್ಪಟೆ ಪಾದ (Flat feet)
4. ನರ ಊತವಿರುವವರು (Varicose Veins)

**9. ನೇಮಕಾತಿ ಹೊಂದಿದ ಅಭ್ಯರ್ಥಿಗಳ ತರಬೇತಿ, ಪರೀಕ್ಷಾರ್ಥ ಅವಧಿ ಹಾಗೂ ಸ್ಥಳ ನಿಯುಕ್ತಿ**

ಅಂತಿಮವಾಗಿ ನೇಮಕಾತಿಗೆ ಅರ್ಹರಾದ ಅಭ್ಯರ್ಥಿಗಳನ್ನು ಕರ್ನಾಟಕ ರಾಜ್ಯದ ಯಾವುದೇ ಅರಣ್ಯ ವೃತ್ತದಲ್ಲಿ/ವಿಭಾಗದಲ್ಲಿ/ಭಾಗದಲ್ಲಿ ನಿಯುಕ್ತಿಗೊಳಿಸಲಾಗುವುದು. ನೇಮಕಾತಿ ಹೊಂದಿದ ಅಭ್ಯರ್ಥಿಯು ಪ್ರಪ್ರಥಮವಾಗಿ ನೇಮಕ ಮಾಡಿದ ಸ್ಥಳದಲ್ಲಿ ಕನಿಷ್ಠ 5 ವರ್ಷಗಳ ಸೇವೆಯನ್ನು ಪೂರೈಸತಕ್ಕದ್ದು.

ನೇಮಕಾತಿ ಹೊಂದಿದ ಅಭ್ಯರ್ಥಿಗಳು ಆಯಾ ಹುದ್ದೆಗೆ ನಿಗದಿಪಡಿಸಿದ ತರಬೇತಿಯನ್ನು ಯಶಸ್ವಿಯಾಗಿ ಪೂರೈಸಬೇಕಾಗಿದೆ. ನಿಗದಿಪಡಿಸಿದ ತರಬೇತಿ ಅವಧಿ ಹಾಗೂ ಪರೀಕ್ಷಾರ್ಥ ಅವಧಿಯ ವಿವರ ಕೆಳಕಂಡಂತಿದೆ.

| ಹುದ್ದೆ | ತರಬೇತಿ ಅವಧಿ | ಪರೀಕ್ಷಾರ್ಥ ಅವಧಿ (ತರಬೇತಿ ಅವಧಿ ಸೇರಿ) |
|---|---|---|
| ವನಪಾಲಕ | 12 ತಿಂಗಳು | 24 ತಿಂಗಳು |
| ಅರಣ್ಯ ರಕ್ಷಕ | 9 ತಿಂಗಳು | 24 ತಿಂಗಳು |

STPF ಗೆ ಆಯ್ಕೆಯಾದ ಅಭ್ಯರ್ಥಿಗಳು ಪೊಲೀಸ್ ಇಲಾಖೆಯಿಂದ 6 ತಿಂಗಳ ತರಬೇತಿಯನ್ನು ಹಾಗೂ ಅರಣ್ಯ ಇಲಾಖೆಯು ಆಯಾ ಹುದ್ದೆಗೆ ನಿಗದಿಪಡಿಸಿದ ತರಬೇತಿಯನ್ನು ಕಡ್ಡಾಯವಾಗಿ ಪೂರೈಸಬೇಕಾಗಿರುತ್ತದೆ.

**10. ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರುವ ಅಭ್ಯರ್ಥಿಗಳು ಸಲ್ಲಿಸಬೇಕಾದ ದಾಖಲೆ/ಪ್ರಮಾಣ ಪತ್ರಗಳ ವಿವರ ಕೆಳಕಂಡಂತಿದೆ.**

ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರಿ ಅರ್ಜಿ ಸಲ್ಲಿಸುವವರು ಜಾತಿ ಪ್ರಮಾಣ ಪತ್ರ ಹಾಗೂ ಆದಾಯ ಪ್ರಮಾಣ ಪತ್ರ, ಇತ್ಯಾದಿ ಮೀಸಲಾತಿ ಕುರಿತು ಪ್ರಮಾಣ ಪತ್ರಗಳನ್ನು ಈ ಕೆಳಕಂಡ ನಮೂನೆಗಳಲ್ಲಿ ಹೊಂದಿರಬೇಕು.

**10.1** ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಡಿ" ರಲ್ಲಿ ಪಡೆದಿರಬೇಕು.

**10.2** ಪ್ರವರ್ಗ–I ಕ್ಕೆ ಸೇರಿದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಇ" ರಲ್ಲಿ ಪಡೆದಿರಬೇಕು.

**10.3** ಪ್ರವರ್ಗ–IIಎ, IIಬಿ, IIIಎ ಮತ್ತು IIIಬಿ. ಗೆ ಸೇರಿದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ನೀಡಲಾದ ಆದಾಯ ಮತ್ತು ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಎಫ್" ರಲ್ಲಿ ಪಡೆದಿರಬೇಕು.

**ವಿಶೇಷ ಸೂಚನೆ:–** "ನಮೂನೆ–ಎಫ್" ಪ್ರಮಾಣ ಪತ್ರವು ಅಧಿಸೂಚನೆಯ ದಿನಾಂಕಕ್ಕೆ ಐದು (5) ವರ್ಷಗಳಿಗಿಂತ ಹೆಚ್ಚು ಹಳೆಯ ಸಮಯದ್ದಾಗಿರಬಾರದು. ಅವಧಿ ಮೀರಿದ ಪ್ರಮಾಣ ಪತ್ರವನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

**10.4** ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಯು ಸಂಬಂಧಪಟ್ಟ ತಹಶೀಲ್ದಾರ್‌ರಿಂದ "ನಮೂನೆ–3" ರಲ್ಲಿ ನೀಡಿರುವ ಪ್ರಮಾಣ ಪತ್ರವನ್ನು ಪಡೆದಿರಬೇಕು.

**10.5** ಮಾಜಿ ಸೈನಿಕ ಅಭ್ಯರ್ಥಿಗಳು ಸಂಬಂಧಪಟ್ಟ ಘಟಕದಿಂದ ಡಿಸ್‌ಚಾರ್ಜ್ ಹೊಂದಿದ ಬಗ್ಗೆ ಮೂಲ ಪ್ರಮಾಣ ಪತ್ರ ಮತ್ತು ಪೆನ್‌ಷನ್ ಪಡೆಯುತ್ತಿರುವ ಬಗ್ಗೆ ದಾಖಲೆ ಪತ್ರ ಪಡೆದಿರಬೇಕು ಹಾಗೂ ಮಾಜಿ ಸೈನಿಕ ಮೀಸಲಾತಿಗೆ ನಿಯಮಾನುಸಾರ ಅರ್ಹರೇ ಎಂಬ ಬಗ್ಗೆ ಪ್ರಮಾಣ ಪತ್ರವನ್ನು ಹತ್ತಿರದ ಸೈನಿಕ ಕಲ್ಯಾಣ ಹಾಗೂ ಪುನರ್ವಸತಿ ಇಲಾಖೆಯಿಂದ ಪಡೆದಿರಬೇಕು.

**10.6** (ಅ) ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–I, IIಎ, IIಬಿ, IIIಎ ಮತ್ತು IIIಬಿ, ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರಿಗೆ (ಎಲ್ಲಾ ವರ್ಷಗಳು) ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡಿದ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯೋಪಾಧ್ಯಾಯರಿಂದ ನೀಡಲಾದ "ನಮೂನೆ–2"ನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ಮೇಲುರುಜು ಮಾಡಿದ ಪ್ರಮಾಣ ಪತ್ರವನ್ನು ಪಡೆದಿರಬೇಕು.

(ಆ) ಗ್ರಾಮೀಣ ಮೀಸಲಾತಿ ಕೋರಿರುವ ಸಾಮಾನ್ಯ ಅರ್ಹತೆಯ (General Merit) ಅಭ್ಯರ್ಥಿಗಳು ಮೇಲೆ 10.6(ಅ) ರಲ್ಲಿ ತಿಳಿಸಿರುವ "ನಮೂನೆ–2" ರ ಜೊತೆಗೆ ನಿಗದಿತ "ನಮೂನೆ–1" ರಲ್ಲಿ ಸಂಬಂಧಪಟ್ಟ ತಹಶೀಲ್ದಾರರಿಂದ ಅವರು ಮೇಲುಸ್ಥರ (Creamy Layer) ಪರಿಮಿತಿಯಲ್ಲಿ ಬರುವುದಿಲ್ಲವೆಂದು ದೃಢೀಕರಿಸಿರುವ ಪ್ರಮಾಣ ಪತ್ರ ಪಡೆದಿರಬೇಕು.

**ವಿಶೇಷ ಸೂಚನೆ:–** ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–I, IIಎ, IIಬಿ, IIIಎ ಮತ್ತು IIIಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಆದಾಯ ಮತ್ತು ಜಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

10.7 ಕನ್ನಡ ಮಾಧ್ಯಮ ವರ್ಗೀಕರಣದಲ್ಲಿ ಮೀಸಲಾತಿ ಕೋರಿರುವ ಅಭ್ಯರ್ಥಿಗಳು ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಮಾಡಿದ ಪ್ರಮಾಣ ಪತ್ರ ಪಡೆದಿರಬೇಕು.

10.8 ಅರಣ್ಯ ಪ್ರೇರಕರಾಗಿ ಅಧಿಸೂಚನೆ ದಿನಾಂಕಕ್ಕೆ ಐದು (5) ವರ್ಷಗಳ ಸೇವೆಯನ್ನು ಸಲ್ಲಿಸಿದ್ದು, ಪ್ರಸ್ತುತ ಅರಣ್ಯ ಪ್ರೇರಕರಾಗಿ ಮುಂದುವರೆಯುತ್ತಿರುವ ಅರಣ್ಯ ಪ್ರೇರಕರ ಬಗ್ಗೆ ಸಂಬಂಧಿಸಿದ ಸಾಮಾಜಿಕ ಅರಣ್ಯ ವಿಭಾಗಗಳ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

10.9 ಅಂಗವಿಕಲರಿಗೆ ಮೀಸಲಿರಿಸಿದ ಹುದ್ದೆಗಳಿಗೆ ಮೀಸಲಾತಿ ಕೋರುವ ಅಭ್ಯರ್ಥಿಗಳು **ಕುಷ್ಠರೋಗದಿಂದ ಗುಣಮುಖರಾಗಿರುವ ಬಗ್ಗೆ** ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ 19.11.2005ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೆನೆನಿ 2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ **ಕುಷ್ಠರೋಗದಿಂದ ಗುಣಮುಖರಾಗಿರುವ ಬಗ್ಗೆ** ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**11.0 ಗಮನಿಸಬೇಕಾದ ಮುಖ್ಯ ಅಂಶಗಳು**

11.1 ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಿದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ.

11.2 ನಿಗದಿತ ಐಸಿಆರ್ ಅರ್ಜಿಯಲ್ಲಿ ಚಿತ್ತು ಅಥವಾ ಹೊಡೆದು ಹಾಕುವುದು ಕೂಡ ಮಾಡಬಾರದು. ಹಾಗೇನಾದರೂ ಚಿತ್ತು ಆದಲ್ಲಿ, ಹೊಡೆದು ಹಾಕಿದಲ್ಲಿ ಅಥವಾ ಅರ್ಜಿಯನ್ನು ವಿರೂಪಗೊಳಿಸಿದ್ದಲ್ಲಿ ಮತ್ತೊಂದು ಅರ್ಜಿಯನ್ನು ಪಡೆದು ತುಂಬಿ ಸಲ್ಲಿಸುವುದು ಅವಶ್ಯಕ. ಖರೀದಿಸಿದ ಐಸಿಆರ್ ಅರ್ಜಿಯನ್ನು ಜೆರಾಕ್ಸ್ ಪ್ರತಿ ಮಾಡಿಸಿ, ಮೊದಲು ಜೆರಾಕ್ಸ್ ಪ್ರತಿಯಲ್ಲಿ ಭರ್ತಿ ಮಾಡಿ, ಅರ್ಜಿಯಲ್ಲಿನ ವಿವರಗಳು ಸರಿಯಾಗಿದೆಯೇ ಎಂದು ಮನಗಂಡು ಆ ನಂತರ ಮೂಲ ಐಸಿಆರ್ ಅರ್ಜಿಯನ್ನು ಭರ್ತಿ ಮಾಡುವುದು ಸೂಕ್ತ.

11.3 ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಜೆರಾಕ್ಸ್ ಪ್ರತಿಯನ್ನು ತಮ್ಮೊಂದಿಗೆ ತಪ್ಪದೇ ಇಟ್ಟುಕೊಳ್ಳಲು ಸೂಚಿಸಿದೆ.

11.4 ಅಭ್ಯರ್ಥಿಗಳು ನಿಗದಿತ ಐಸಿಆರ್ ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ/ವಿವರಗಳ ಆಧಾರದ ಮೇಲೆ ಅವರ ಅರ್ಹತೆಯನ್ನು ಪರಿಗಣಿಸುವುದರಿಂದ ಮತ್ತು ಅಭ್ಯರ್ಥಿಗಳು ಸಲ್ಲಿಸುವ ಅರ್ಜಿಗಳನ್ನು ಸ್ಕ್ಯಾನಿಂಗ್ ಮಾಡಿಸಿ ಗಣಕ ಯಂತ್ರದ ಮುಖೇನ 1:20 (ಖಾಲಿ ಹುದ್ದೆ : ಅಭ್ಯರ್ಥಿ) ಅನುಪಾತದ ಪಟ್ಟಿಯನ್ನು ಸಿದ್ಧಪಡಿಸುವುದರಿಂದ ಅಭ್ಯರ್ಥಿಯು ಅರ್ಜಿಯನ್ನು ಭರ್ತಿ ಮಾಡುವಾಗ ಅಸ್ಪಷ್ಟ/ಅಪೂರ್ಣ/ತಪ್ಪು ಅಥವಾ ಸುಳ್ಳು ಮಾಹಿತಿ ನೀಡಬಾರದು. ಅಸ್ಪಷ್ಟ/ಅಪೂರ್ಣ/ತಪ್ಪು ಅಥವಾ ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಭ್ಯರ್ಥಿಗಳೇ ಅದಕ್ಕೆ ನೇರ ಮತ್ತು ಸಂಪೂರ್ಣ ಜವಾಬ್ದಾರರಾಗುತ್ತಾರೆ. ಅಭ್ಯರ್ಥಿಗಳು ನಿಗದಿತ ಐಸಿಆರ್ ಅರ್ಜಿಯಲ್ಲಿ ನೀಡಿರುವ ಮಾಹಿತಿ/ವಿವರಗಳನ್ನು ಯಾವುದೇ ಹಂತದಲ್ಲಿಯೂ ಬದಲಾವಣೆ ಮಾಡಲು ಅವಕಾಶ ನೀಡಲಾಗುವುದಿಲ್ಲ. ಆದ ಪ್ರಯುಕ್ತ ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವಾಗ ಈ ಕಚೇರಿಯ ಅಧಿಸೂಚನೆಯಲ್ಲಿ ತಿಳಿಸಿರುವ ಎಲ್ಲಾ ಅಂಶಗಳು ಹಾಗೂ ಅರ್ಜಿ ಭರ್ತಿ ಮಾಡುವ ವಿಧಾನದ ಕುರಿತು ಅಭ್ಯರ್ಥಿಗಳ ಸೂಚನಾ ಪುಸ್ತಕದಲ್ಲಿ ಸೂಚಿಸಿರುವ ಎಲ್ಲಾ ಅಂಶಗಳನ್ನು ಸರಿಯಾಗಿ ಅರ್ಥೈಸಿಕೊಂಡು, ಅರ್ಜಿಯನ್ನು ಸರಿಯಾಗಿ ಮತ್ತು ಸಮರ್ಪಕವಾಗಿ ಭರ್ತಿ ಮಾಡತಕ್ಕದ್ದು.

11.5 ಪ್ರವರ್ಗದ ಮೀಸಲಾತಿಯಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅರ್ಜಿಯಲ್ಲಿ ಪ್ರವರ್ಗದ ಕಾಲಂ ಅನ್ನು ಕಡ್ಡಾಯವಾಗಿ ನಮೂದಿಸಬೇಕು. ಈ ಕಾಲಂ ಅನ್ನು ಭರ್ತಿ ಮಾಡದೆ ಖಾಲಿ ಬಿಟ್ಟಲ್ಲಿ "ಸಾಮಾನ್ಯ ಅರ್ಹತೆ" ಎಂದು ಪರಿಗಣಿಸಲಾಗುವುದು. ಯಾವುದೇ ಹಂತದಲ್ಲಿ ಅಭ್ಯರ್ಥಿಯು ತಾನು ಹೊಂದಿರುವ ಪ್ರವರ್ಗದ ಕುರಿತು ಮಾಹಿತಿಯನ್ನು ಹೊಸದಾಗಿ ಸೇರ್ಪಡೆ ಮಾಡಲು ಅಥವಾ ಬದಲಾವಣೆ ಮಾಡಲು ಅವಕಾಶವಿಲ್ಲ.

11.6 ಅಭ್ಯರ್ಥಿಗಳು ತಮ್ಮ ಅರ್ಜಿಗಳಲ್ಲಿ ನೀಡಿರುವ ಮಾಹಿತಿಗಳು ಸರಿ ಇದೆ ಎಂದು ಭಾವಿಸಿ ಅವರುಗಳು ದೇಹದಾರ್ಢ್ಯತೆ, ದೈಹಿಕ ತಾಳ್ಮೆ ಮತ್ತು ಲಿಖಿತ Aptitude ಪರೀಕ್ಷೆಯನ್ನು ಬರೆಯಲು ಅರ್ಹರೇ ಎಂಬುದನ್ನು

ಸ್ಕ್ಯಾನಿಂಗ್ ಮುಖಾಂತರ ಪರಿಗಣಿಸಿ ಅರ್ಹರೆಂದು ಕಂಡು ಬಂದ ಅಭ್ಯರ್ಥಿಗಳಿಗೆ ಮಾತ್ರ ಪ್ರವೇಶ ಪತ್ರಗಳನ್ನು ಜಾರಿ ಮಾಡಲಾಗುತ್ತದೆ. ಆದ್ದರಿಂದ ನಿಗದಿಪಡಿಸಿದ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ, ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಪೂರ್ಣ ಮಾಹಿತಿ ನೀಡದ ಅಥವಾ ತಪ್ಪು ಮಾಹಿತಿ ನೀಡಿದ, ಅಭ್ಯರ್ಥಿ ಸಹಿ ಇಲ್ಲದ ಮತ್ತು ಅಭ್ಯರ್ಥಿಯ ಭಾವಚಿತ್ರ ಅಂಟಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**11.7** ಅರ್ಜಿಯನ್ನು ಖರೀದಿಸಲು ಕೊಟ್ಟ ಮೌಲ್ಯವನ್ನು ಯಾವುದೇ ಕಾರಣಕ್ಕೂ ಮರುಪಾವತಿ ಮಾಡಲಾಗುವುದಿಲ್ಲ.

**11.8** ಅಂಚೆ ಮೂಲಕ ಅಥವಾ ಇನ್ನಿತರೆ ಯಾವುದೇ ವ್ಯವಸ್ಥೆ ಮೂಲಕ ನಿಗದಿಪಡಿಸಿದ ದಿನಾಂಕದ ನಂತರ ಸ್ವೀಕೃತವಾದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ ಹಾಗೂ ಅರ್ಜಿಗಳು ಮೇಲೆ ತಿಳಿಸಿರುವ ವಿಳಾಸಕ್ಕೆ ತಲುಪಲು ವಿಳಂಬವಾದರೆ ಅಥವಾ ಸ್ವೀಕೃತವಾಗದೇ ಇರುವುದಕ್ಕೆ ಇಲಾಖೆಯು ಜವಾಬ್ದಾರಿಯಲ್ಲ.

**11.9** ನಿಗದಿತ ನಮೂನೆಯಲ್ಲಿಲ್ಲದ ಅಥವಾ ಅಸ್ಪಷ್ಟ/ಅಪೂರ್ಣ ಮಾಹಿತಿ ಭರ್ತಿ ಮಾಡಿದ ಅರ್ಜಿಗಳನ್ನು ಅನರ್ಹ ಅರ್ಜಿಗಳೆಂದು ಪರಿಗಣಿಸಿ ತಿರಸ್ಕರಿಸಲಾಗುವುದು. ಅಭ್ಯರ್ಥಿಯು ಅರ್ಜಿಯನ್ನು ಸಮರ್ಪಕವಾಗಿ ಭರ್ತಿ ಮಾಡದೆ ಅರ್ಜಿಯು ತಿರಸ್ಕೃತವಾದಲ್ಲಿ ಅಥವಾ ಯಾವುದೇ ಸೌಲಭ್ಯದಿಂದ ವಂಚಿತರಾದಲ್ಲಿ ತತ್ಸಂಬಂಧ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

**11.10** ಒಬ್ಬನೇ ಅಭ್ಯರ್ಥಿಯು ಒಂದೇ ಹುದ್ದೆಗೆ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ, ತಾನು ಸಲ್ಲಿಸಿರುವ ಎಲ್ಲಾ ಅರ್ಜಿಗಳಲ್ಲಿಯೂ ಒಂದೇ ರೀತಿ ಮಾಹಿತಿಯನ್ನು ನೀಡಿದಲ್ಲಿ ಅಭ್ಯರ್ಥಿ ಸಲ್ಲಿಸಿರುವ ಯಾವುದಾದರೂ ಒಂದು ಅರ್ಜಿಯನ್ನು ಮಾತ್ರ ಪರಿಗಣಿಸಲಾಗುವುದು. ಈ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ತೀರ್ಮಾನವೇ ಅಂತಿಮವಾಗಿರುತ್ತದೆ.

**11.11** ಅಭ್ಯರ್ಥಿಯು ಒಂದೇ ಹುದ್ದೆಗೆ ಒಂದಕ್ಕಿಂತ ಹೆಚ್ಚಿನ ಅರ್ಜಿ ಭರ್ತಿ ಮಾಡಿ ಬೇರೆ ಬೇರೆ ಅರ್ಜಿಗಳಲ್ಲಿ ವಿಭಿನ್ನವಾದ ಮಾಹಿತಿಗಳನ್ನು ನಮೂದಿಸಿದ್ದಲ್ಲಿ ಅಂತಹ ಅಭ್ಯರ್ಥಿಯು ಸಲ್ಲಿಸಿದ ಎಲ್ಲಾ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**11.12** ಅಭ್ಯರ್ಥಿಯು ವನಪಾಲಕ ಹಾಗೂ ಅರಣ್ಯ ರಕ್ಷಕ ಈ ಎರಡೂ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸಿ ಈ ಎರಡೂ ಹುದ್ದೆಗಳ ಅರ್ಜಿಗಳಲ್ಲಿ ಭಿನ್ನ ಭಿನ್ನವಾದ ಮಾಹಿತಿಗಳನ್ನು ನಮೂದಿಸಿದ್ದಲ್ಲಿ ಅಂತಹ ಅಭ್ಯರ್ಥಿಯು ಸಲ್ಲಿಸಿರುವ ಎರಡೂ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**11.13** ಪ್ರಸ್ತುತ ಸರ್ಕಾರಿ (ಕೇಂದ್ರ ಸರ್ಕಾರ/ಕರ್ನಾಟಕ ರಾಜ್ಯ ಸರ್ಕಾರ/ಇತರೆ ರಾಜ್ಯಗಳು) ಹಾಗೂ ಸಂಸ್ಥೆಗಳಲ್ಲಿ ಅಥವಾ ಪ್ರಾಧಿಕಾರದಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದಿಂದ ಕಡ್ಡಾಯವಾಗಿ ಅನುಮತಿ ಪತ್ರವನ್ನು ಅಭ್ಯರ್ಥಿಗಳ ಸೂಚನಾ ಪುಸ್ತಕದಲ್ಲಿ ನೀಡಿರುವ ನಮೂನೆಯಲ್ಲಿ ಪಡೆದಿಟ್ಟುಕೊಂಡು ಅರಣ್ಯ ಇಲಾಖೆಯು ಅಪೇಕ್ಷಿಸಿದಾಗ ನೀಡತಕ್ಕದ್ದು.

**11.14** ಯಾವುದೇ ಅಭ್ಯರ್ಥಿಯು ತನ್ನ ಆಯ್ಕೆಗೆ ಸಂಬಂಧಿಸಿದಂತೆ ಬಾಹ್ಯ ಒತ್ತಡ ತರಲು ಪ್ರಯತ್ನಿಸಿದಲ್ಲಿ ಅಂತಹ ಅಭ್ಯರ್ಥಿಯನ್ನು ಆಯ್ಕೆ ಪ್ರಕ್ರಿಯೆಯಿಂದ ಅನರ್ಹಗೊಳಿಸಲಾಗುವುದು.

**11.15** ಕರ್ನಾಟಕ ರಾಜ್ಯದ ಯಾವುದೇ ಸರ್ಕಾರಿ ಇಲಾಖೆ, ಕೇಂದ್ರ ಸರ್ಕಾರಿ ಇಲಾಖೆ ಅಥವಾ ಅರೆ ಸರ್ಕಾರಿ ಸ್ವಾಮ್ಯದ ಸಂಸ್ಥೆಯ ಸೇವೆಯಿಂದ ವಜಾಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

**11.16** ಕಾನೂನು ಬಾಹಿರವೆಂದು ಘೋಷಿಸಲಾದ ಸಂಸ್ಥೆ/ಸಂಸ್ಥೆಗಳು ಅಥವಾ ಸಂಘದ/ಸಂಘಗಳ ಸದಸ್ಯರಾಗಿದ್ದರೆ ಅಥವಾ ಇನ್ನಾವುದೇ ರೀತಿಯಲ್ಲಿ ಅಂತಹ ಸಂಸ್ಥೆ/ಸಂಸ್ಥೆಗಳು ಅಥವಾ ಸಂಘದ/ಸಂಘಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರೆ ಅಂತಹ ವ್ಯಕ್ತಿ ನೇಮಕಾತಿಗೆ ಅರ್ಹರಾಗುವುದಿಲ್ಲ.

**11.17** ಅಭ್ಯರ್ಥಿಯು ಸಮಾಜಘಾತುಕ ಕೃತ್ಯಗಳಲ್ಲಿ ತೊಡಗಿ ಅಪರಾಧಿಯಾಗಿದ್ದರೆ ಅಂತಹ ವ್ಯಕ್ತಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

**11.18** ಒಬ್ಬರಿಗಿಂತ ಹೆಚ್ಚು ಜೀವಂತ ಪತ್ನಿಯರನ್ನು / ಪತಿಯರನ್ನು ಹೊಂದಿದ ಪುರುಷ / ಮಹಿಳೆ ಅಭ್ಯರ್ಥಿಗಳು ಸರ್ಕಾರದ ಪೂರ್ವಾನುಮತಿ ಇಲ್ಲದೇ ನೇಮಕಾತಿಗೆ ಅರ್ಹರಾಗಿರುವುದಿಲ್ಲ.

**11.19** ಯಾವುದೇ ಅಭ್ಯರ್ಥಿಯು ಕೇಂದ್ರ ಅಥವಾ ಯಾವುದೇ ರಾಜ್ಯ ಸರ್ಕಾರ / ಸರ್ಕಾರಿ ಸಂಸ್ಥೆಗಳಿಗೆ ನಡೆಸುವ ಯಾವುದೇ ಪರೀಕ್ಷೆಗಳಿಗೆ ಅಥವಾ ಆಯ್ಕೆಗಳಿಗೆ ಹಾಜರಾಗಲು ತಾತ್ಕಾಲಿಕವಾಗಿ ಬಹಿಷ್ಕರಿಸಲ್ಪಟ್ಟಿದ್ದರೆ ಅಥವಾ

ಖಾಯಂ ಆಗಿ ಅನರ್ಹಗೊಂಡಿದ್ದರೆ ಅಥವಾ ಬಹಿಷ್ಕರಿಸಲ್ಪಟ್ಟಿದ್ದರೆ, ಅಂತಹ ಅಭ್ಯರ್ಥಿಯು ನೇಮಕಾತಿಗೆ ಅರ್ಹರಾಗಿರುವುದಿಲ್ಲ.

**11.20** ಅಭ್ಯರ್ಥಿಯು ನೇಮಕಾತಿ ಪರೀಕ್ಷೆಗೆ ಬೇರೊಬ್ಬ ವ್ಯಕ್ತಿಯನ್ನು ತನ್ನ ಪರವಾಗಿ ಕಳುಹಿಸಿದಲ್ಲಿ ಅಥವಾ ತಪ್ಪು ಮಾಹಿತಿಗಳನ್ನು ನಮೂದಿಸಿದಲ್ಲಿ ಅಥವಾ ಕೃತ್ರಿಮ ಅಥವಾ ತಿದ್ದಿದ ದಾಖಲಾತಿಗಳನ್ನು ಅಥವಾ ಅಸತ್ಯ ವಿವರಗಳನ್ನು ನೀಡಿದಲ್ಲಿ ಅಥವಾ ಸತ್ಯ ವಿಷಯಗಳನ್ನು ಮರೆಮಾಚಿದ ಅಥವಾ ಅನುಚಿತ ಮಾರ್ಗಗಳನ್ನು ಉಪಯೋಗಿಸಿದಲ್ಲಿ ಅಥವಾ ಪ್ರಯತ್ನಿಸಿದಲ್ಲಿ ಈ ನೇಮಕಾತಿಗೆ ಅವರನ್ನು ಅನರ್ಹರೆಂದು ಪರಿಗಣಿಸಲಾಗುವುದು ಮತ್ತು ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ಉಪ ನಿಯಮ 20 ರಂತೆ ಅಪರಾಧಿ ವ್ಯವಹರಣೆಗೆ ಒಳಪಡುವರು.

**11.21** ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ–ಎಸ್‌ಪಿಎಲ್–04–ಪಿಇಟಿ–2005 ದಿನಾಂಕ 31–3–2006 ರಂತೆ ಅಂಶದಾಯಿ ನಿವೃತ್ತಿ ಯೋಜನೆ (Contributory Pension Scheme) ಗೆ ಈ ನೇಮಕಾತಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಬದ್ಧರಾಗಿರುತ್ತಾರೆ.

**11.22** ಲಿಖಿತ Aptitude ಪರೀಕ್ಷೆಯ ಪ್ರಶ್ನೆ ಪತ್ರಿಕೆಯ ಬಗ್ಗೆ ಅಭ್ಯರ್ಥಿಗಳಿಗೆ ಯಾವುದೇ ಬಗೆಯ ಆಕ್ಷೇಪಣೆ ಇದ್ದಲ್ಲಿ ಪರೀಕ್ಷಾ ಕೇಂದ್ರವನ್ನು ಬಿಡುವ ಮೊದಲು ಅಭ್ಯರ್ಥಿಗಳು ಆಯಾ ಪರೀಕ್ಷಾ ದಿನವೇ ಅಭ್ಯರ್ಥಿಯ ಹೆಸರು, ವಿಳಾಸ, ನೋಂದಣಿ ಸಂಖ್ಯೆ, ಆಕ್ಷೇಪಣೆಯ ವಿವರ, ಸಹಿ, ಇತ್ಯಾದಿಗಳನ್ನು ನಮೂದಿಸಿರುವ ಲಿಖಿತ ಮನವಿಯನ್ನು ಸಂಬಂಧಿಸಿದ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಪ್ರಾದೇಶಿಕ ಪರೀಕ್ಷಕರು ಇವರಿಗೆ ಸಲ್ಲಿಸಿ ಅವರಿಂದ ಸ್ವೀಕೃತಿ (Acknowledgement) ಪಡೆಯಬೇಕು. ಪರೀಕ್ಷಾ ಕೇಂದ್ರ ಬಿಟ್ಟ ನಂತರ ಕಳುಹಿಸುವ ಯಾವುದೇ ಆಕ್ಷೇಪಣೆಯನ್ನು ಮಾನ್ಯ ಮಾಡಲಾಗುವುದಿಲ್ಲ.

**11.23** ಆಯ್ಕೆ ಮತ್ತು ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಆಯ್ಕೆಗೆ ಪರಿಗಣಿಸಿರುವ ಅಂಶಗಳ ಬಗ್ಗೆ ವ್ಯತ್ಯಾಸ ಕಂಡು ಬಂದಲ್ಲಿ ಅಥವಾ ಆಕ್ಷೇಪಣೆ ಸಲ್ಲಿಕೆಯಾದಲ್ಲಿ, ಕೋರ್ಟು ತೀರ್ಪುಗಳು, ಸರಕಾರದ ನಿರ್ದೇಶನಗಳು, ಇಲಾಖೆ ಸುತ್ತೋಲೆಗಳು ಬಂದಲ್ಲಿ, ಪ್ರಕಟಿಸಿರುವ ಆಯ್ಕೆ ಪಟ್ಟಿಯಲ್ಲಿ ಸೂಕ್ತ ಬದಲಾವಣೆ ಮಾಡಿ ಆಯ್ಕೆ ಪಟ್ಟಿ ಪರಿಷ್ಕರಿಸುವ ಅಧಿಕಾರವನ್ನು ಆಯ್ಕೆ ಪ್ರಾಧಿಕಾರವು ಹೊಂದಿರುತ್ತದೆ.

**11.24** ಒಂದು ವೇಳೆ ಅಧಿಸೂಚನೆಯಲ್ಲಿ ನಮೂದಿಸಿರುವ ಹುದ್ದೆಗಳ ಸಂಖ್ಯೆಯಲ್ಲಿ ಕಡಿತ ಅಥವಾ ಹೆಚ್ಚುವರಿ ಆದಲ್ಲಿ ಮತ್ತು ಮೀಸಲಾತಿ ವರ್ಗೀಕರಣದಲ್ಲಿ ಏನಾದರೂ ಬದಲಾವಣೆ ಮಾಡಬೇಕಾದ ಅವಶ್ಯಕತೆ ಕಂಡು ಬಂದಲ್ಲಿ ಬದಲಾವಣೆ ಮಾಡಲಾಗುವುದು ಮತ್ತು ಬದಲಾದ ವಿವರಗಳನ್ನು ಇಲಾಖಾ ವೆಬ್‌ಸೈಟ್: **www.karnatakaforest.gov.in** ನಲ್ಲಿ ಪ್ರಕಟಿಸಲಾಗುವುದು.

**11.25** ಅಭ್ಯರ್ಥಿಯು ಹುದ್ದೆಗೆ ಅರ್ಜಿ ಸಲ್ಲಿಸಿದ ತಕ್ಷಣ ತಾನು ನಿಯಮ ಮತ್ತು ಅಧಿನಿಯಮಗಳಿಗೆ (Rules & Regulations) ಬದ್ಧನಾಗಿರುತ್ತಾನೆ ಎಂದು ಭಾವಿಸಲಾಗಿರುತ್ತದೆ. ಒಂದು ವೇಳೆ ತಾನು ಸದರಿ ಹುದ್ದೆಗೆ ಆಯ್ಕೆಯಾಗದ ಪಕ್ಷದಲ್ಲಿ ತದನಂತರ ಅದೇ ನಿಯಮಗಳನ್ನು ಪ್ರಶ್ನಿಸಲು ಬರುವುದಿಲ್ಲ.

**11.26** ಉತ್ತರ ಪತ್ರಿಕೆಯನ್ನು ಸ್ಕ್ಯಾನಿಂಗ್ ಮಾಡಿಸಿ ಗಣಕ ಯಂತ್ರದ ಮುಖೇನ ಅರ್ಹತಾ ಪಟ್ಟಿಯನ್ನು ಸಿದ್ಧಪಡಿಸುವುದರಿಂದ ಲಿಖಿತ (Aptitude) ಪರೀಕ್ಷೆಗೆ ಅರ್ಹತೆ ಪಡೆದಿರುವ ಅಭ್ಯರ್ಥಿಗಳು ಉತ್ತರ ಪತ್ರಿಕೆಯ ಮಾಹಿತಿಯನ್ನು ಭರ್ತಿ ಮಾಡುವ ಸಲುವಾಗಿ ಪರೀಕ್ಷೆಗೆ ನಿಗದಿಪಡಿಸಿರುವ ಸಮಯಕ್ಕಿಂತ ಅರ್ಧ ಗಂಟೆ ಮುಂಚಿತವಾಗಿ ಪರೀಕ್ಷಾ ಕೊಠಡಿಗೆ ತಪ್ಪದೇ ಹಾಜರಾಗತಕ್ಕದ್ದು. ಆ ಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಕೆಲವು ಮಾರ್ಗಸೂಚನೆಗಳನ್ನು ನೀಡುತ್ತಾರೆ.

**11.27** ಯಾವುದೇ ಪರೀಕ್ಷೆಗೆ ಸೂಚನೆ / ತಿಳುವಳಿಕೆ ಪತ್ರ ದೊರಕದ ಅಭ್ಯರ್ಥಿಗಳು ನೇಮಕಾತಿಗೆ ಆಯ್ಕೆಯಾಗಿ ರುವುದಿಲ್ಲವೆಂದು ತಿಳಿಯುವುದು. ಈ ವಿಷಯದಲ್ಲಿ ಯಾವುದೇ ಪತ್ರ ವ್ಯವಹಾರಕ್ಕೆ ಆಸ್ಪದವಿರುವುದಿಲ್ಲ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ
ಮತ್ತು ಆಯ್ಕೆ ಪ್ರಾಧಿಕಾರ.

ಪಿ.ಆರ್. 814

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ವಿಜಾಪೂರ

### ಅಧಿಸೂಚನೆ

**ಕ್ರಮಾಂಕ: ಕಂವಿ/ಸಿಬ್ಬಂದಿ/4/ವಿವ–336/08–09, ವಿಜಾಪೂರ, ದಿನಾಂಕ: 26ನೇ ಸೆಪ್ಟೆಂಬರ್ 2009**

**ವಿಷಯ:** ವಿಜಾಪೂರ ಜಿಲ್ಲೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ಭರ್ತಿ ಮಾಡುವ ಕುರಿತು.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಕ್ರ: ಆರ್‌ಡಿ/299/ಬಿಎಸ್‌ಸಿ/2006 ದಿನಾಂಕ.3/2/2009
2) ಸರ್ಕಾರದ ಅಧಿಸೂಚನೆ ಕ್ರ: ಆರ್‌ಡಿ/299/ಬಿಎಸ್‌ಸಿ/2006 ದಿನಾಂಕ.24/07/2009
3) ಸರ್ಕಾರದ ಅಧಿಸೂಚನೆ ಕ್ರ: ಆರ್‌ಡಿ/299/ಬಿಎಸ್‌ಸಿ/2006.ದಿನಾಂಕ.08/09/2009

ಮೇಲ್ಕಂಡ ಸರಕಾರದ ಅಧಿಸೂಚನೆಯನ್ವಯ ವಿಜಾಪೂರ ಜಿಲ್ಲೆಯಲ್ಲಿ ಖಾಲಿ ಇರುವ ಗ್ರಾಮ ಲೆಖ್ಖಿಗರ ಹುದ್ದೆಗಳನ್ನು ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿಪಡಿಸಿದ ಅರ್ಜಿಯಲ್ಲಿ ಜಾಗರೂಕತೆಯಿಂದ ಭರ್ತಿ ಮಾಡಿ ಸಲ್ಲಿಸತಕ್ಕದ್ದು.

**ಆಸಕ್ತರು ಅರ್ಜಿಗಳನ್ನು ದಿನಾಂಕ 30/10/2009 ಸಾಯಂಕಾಲ 5–00 ಗಂಟೆಯೊಳಗೆ ಜಿಲ್ಲಾಧಿಕಾರಿಗಳು ವಿಜಾಪೂರ ಇವರ ಕಾರ್ಯಾಲಯಕ್ಕೆ ಸಲ್ಲಿಸಿ ಸ್ವೀಕೃತಿ ಪಡೆಯಬೇಕು.**

**ಖಾಲಿ ಇರುವ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತೆ ಅದೆ.**

| ಮೀಸಲಾತಿ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಅಂಗವಿಕಲರು | ಯೋಜನಾ ನಿರಾಶ್ರಿತರು | ಕನ್ನಡ ಮಾಧ್ಯಮ | ಒಟ್ಟು |
|---|---|---|---|---|---|---|---|---|
| ಪ.ಜಾ | 02 | 03 | 03 | 01 | 01 | –– | –– | 10 |
| ಪ.ಪಂ | 01 | 01 | –– | –– | –– | –– | –– | 02 |
| ಪ್ರವರ್ಗ–1 | 01 | 01 | 01 | –– | –– | –– | –– | 03 |
| ಪ್ರ.ವರ್ಗ–2(ಎ) | 02 | 03 | 03 | –– | 01 | –– | –– | 09 |
| ಪ್ರ.ವರ್ಗ–2(ಬಿ) | 01 | 01 | –– | –– | –– | –– | –– | 02 |
| ಪ್ರ.ವರ್ಗ–3(ಎ) | 01 | 01 | –– | –– | –– | –– | –– | 02 |
| ಪ್ರ.ವರ್ಗ–3 (ಬಿ) | 01 | 01 | –– | –– | –– | –– | –– | 02 |
| ಸಾಮಾನ್ಯ | 06 | 09 | 08 | 03 | 02 | 01 | 01 | 30 |
| **ಒಟ್ಟು** | **15** | **20** | **15** | **04** | **04** | **01** | **01** | **60** |

ಅಂಗವಿಕಲರಿಗೆ ಮೀಸಲಿದ್ದ ಹುದ್ದೆಗಳಿಗೆ ಕುಷ್ಠರೋಗದಿಂದ ಗುಣಮುಖರಾದವರು, ಶ್ರವಣದೋಷವುಳ್ಳವರು ಹಾಗೂ ಮಾನಸಿಕ ಅಸ್ವಸ್ಥವುಳ್ಳವರು ಮಾತ್ರ ಅರ್ಜಿ ಸಲ್ಲಿಸಬಹುದು.

**ವಿದ್ಯಾರ್ಹತೆ :–**

1) ಪಿಯುಸಿ ಪಾಸಾಗಿರತಕ್ಕದ್ದು ಅಥವಾ ಸಿ.ಬಿ.ಎಸ್.ಇ/ಐ.ಸಿ.ಎಸ್.ಇ ಇವರಿಂದ ನಡೆಸಲ್ಪಟ್ಟ 12ನೇ ತರಗತಿ ಪರೀಕ್ಷೆಯಲ್ಲಿ ಪಾಸಾಗಿರತಕ್ಕದ್ದು.

**ವಯೋಮಿತಿ :–**

| | | | |
|---|---|---|---|
| ಕನಿಷ್ಠ ವಯೋಮಿತಿ | : | 18 ವರ್ಷ | |
| ಗರಿಷ್ಠ ವಯೋಮಿತಿ | : | ಸಾಮಾನ್ಯ ವರ್ಗ | : 35 ವರ್ಷ |
| | | 2ಎ/2ಬಿ/3ಎ/3ಬಿ | : 38 ವರ್ಷ |
| | | ಪ.ಜಾ./ಪ.ಪಂ/ಪ್ರ.ವರ್ಗ–1 | : 40 ವರ್ಷ |

ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರನ್ವಯ ವಯೋಮಿತಿಯಲ್ಲಿ ಸಡಿಲಿಕೆಯುಂಟು.

**ವೇತನ ಶ್ರೇಣಿ :–**

ರೂ.5800–100–6000–125–6500–150–7100–175–7800–200–8600–225–9500–250–10500 ಮತ್ತು ಇತರೆ ಭತ್ಯೆಗಳು

**ಆಯ್ಕೆ ವಿಧಾನ :–**

**ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಹಾಗೂ ರೋಸ್ಟರ್ ಪ್ರಕಾರ ಮೆರಿಟ್ ಪಟ್ಟಿ ತಯಾರಿಸಿ ಆಯ್ಕೆ ಮಾಡಲಾಗುವುದು.**

**ಪರಿವೀಕ್ಷಣಾ ಅವಧಿ :–**

ಆಯ್ಕೆಯಾದ ಅಭ್ಯರ್ಥಿಗಳನ್ನು ನೇಮಕಾತಿ ನಿಯಮಗಳಂತೆ ಎರಡು ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿ ಇಡಲಾಗುವುದು. ಈ ಅವಧಿಯಲ್ಲಿ 6 ತಿಂಗಳ ಅವಧಿ ಮೀರದಂತೆ ತರಬೇತಿ ನೀಡಲಾಗುವುದು.

**ಅರ್ಜಿ ಸಲ್ಲಿಸುವ ವಿಧಾನ :–**

ನಿಗದಿತ ನಮೂನೆಯ ಅರ್ಜಿಯನ್ನು ಜಿಲ್ಲಾಧಿಕಾರಿಗಳು ವಿಜಾಪೂರ, ತಹಶೀಲ್ದಾರ ವಿಜಾಪೂರ, ಬ.ಬಾಗೇವಾಡಿ, ಮುದ್ದೇಬಿಹಾಳ, ಇಂಡಿ, ಸಿಂದಗಿ ಇವರ ಕಛೇರಿಯಲ್ಲಿ ರೂ 10.00 ಸಂದಾಯಿಸಿ ದಿನಾಂಕ 26/09/2009 ನಂತರ ಪಡೆಯಬಹುದಾಗಿದೆ. ಹೀಗೆ ಪಡೆದು ಎಲ್ಲ ರೀತಿಯಲ್ಲಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಗಳನ್ನು ಮಾತ್ರ ಪರಿಗಣಿಸಲಾಗುವುದು. ಈ ಅರ್ಜಿಗೆ ಪಿನ್ /ಸ್ಟ್ಯಾಪಲ್ ಮಾಡತಕ್ಕದ್ದಲ್ಲ.

**ಪ್ರಾಮುಖ್ಯವಾದ ಸೂಚನೆಗಳು:–**

**ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳ ಒಂದೊಂದು ಛಾಯಾ (ಫೋಟೋ)ಪ್ರತಿಗಳನ್ನು ಸ್ವ–ದೃಢೀಕರಿಸಿ ಅರ್ಜಿ ಸಂಖ್ಯೆಯನ್ನು ನಮೂದಿಸಿ ಒಂದೇ ಲಕೋಟೆಯಲ್ಲಿ ಪ್ರತ್ಯೇಕವಾಗಿ ಸಲ್ಲಿಸತಕ್ಕದ್ದು.**

1) ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆ (2ನೇ ಪಿ.ಯು.ಸಿ ಅಥವಾ ಸಿ.ಬಿ.ಎಸ್.ಇ/ಐ.ಸಿ.ಎಸ್.ಇ 12ನೇ ತರಗತಿಯ ಅಂಕಪಟ್ಟಿಗಳು)
2) ಜನ್ಮದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆ ಪ್ರಮಾಣ ಪತ್ರ/ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದೃತ ಭಾಗ
3) ಸೈನಿಕ ಸೇವೆಯಿಂದ ಬಿಡುಗಡೆಯಾದ/ಮುಕ್ತಿಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕರ ಮೀಸಲಾತಿ ಕೋರಿದ್ದಲ್ಲಿ)
4) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರ.ವರ್ಗ–1, ಪ್ರ.ವರ್ಗ–2ಎ, ಪ್ರ.ವರ್ಗ–2ಬಿ, ಪ್ರ.ವರ್ಗ–3ಎ, ಪ್ರ.ವರ್ಗ 3ಬಿ ಗಳ ಇತ್ತೀಚಿಗೆ ಪಡೆದ ಮೀಸಲಾತಿ ಪ್ರಮಾಣ ಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ (ಮೀಸಲಾತಿ ಕೋರಿದ್ದಲ್ಲಿ)
5) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ ಮೀಸಲಾತಿ ಕೋರಿದ್ದಲ್ಲಿ.
6) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
7) ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
8) ಯೋಜನೆಗಳಿಂದ ನಿರಾಶ್ರಿತರಾದ ಅಭ್ಯರ್ಥಿಯ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
9) ಕಾಲೇಜಿನ ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ ಹಾಗೂ ಸ್ಥಳೀಯ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ 6 ತಿಂಗಳ ಈಚೆಗಿನ 2 ನಡತೆ ಪ್ರಮಾಣ ಪತ್ರ
10) ಅಭ್ಯರ್ಥಿಗಳು ಈ ಕೆಳಗೆ ನಿಗದಿಪಡಿಸಿದ ಫೀಯನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಟ್ರೆಝರಿ ಬ್ರ್ಯಾಂಚ್ ವಿಜಾಪೂರದಲ್ಲಿ ಇರುವ **"ಜಿಲ್ಲಾಧಿಕಾರಿಗಳು ವಿಜಾಪೂರ"** ಇವರ ಎಸ್.ಬಿ. ಖಾತೆ ಸಂಖ್ಯೆ 11034252426 ಕ್ಕೆ ರಾಜ್ಯದಲ್ಲಿನ ಯಾವುದೇ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಬ್ರ್ಯಾಂಚ್‌ದಿಂದ ಜಮಾ ಮಾಡಿ ಚಲನ್ ಪ್ರತಿಯನ್ನು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.

| | |
|---|---|
| 1) ಇತರೆ ಅಭ್ಯರ್ಥಿ | : **ರೂ.200–00 (ರೂ. ಎರಡುನೂರು ಮಾತ್ರ)** |
| 2) ಪ.ಜಾ/ಪ.ಪಂ/ಪ್ರವರ್ಗ–1 ಅಂಗವಿಕಲ/ಮಾಜಿ ಸೈನಿಕರು | : **ರೂ.100–00 (ರೂ.ಒಂದುನೂರು ಮಾತ್ರ)** |

ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂತಿರುಗಿಸಲಾಗುವುದಿಲ್ಲ.

**ಇತರೆ ಸೂಚನೆಗಳು:–**

1) ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ಮೇಲಾಧಿಕಾರಿಗಳಿಂದ ಪಡೆದ ದೃಢೀಕರಣ ಹಾಗೂ ಅನುಮತಿ ಪ್ರಮಾಣ ಪತ್ರವನ್ನು ನೀಡತಕ್ಕದ್ದು.
2) ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವೆಂದು ಘೋಷಿಸಲ್ಪಟ್ಟರೆ ಅದರ ಮಾರನೇ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
3) ಅಭ್ಯರ್ಥಿಯ ಹೆಸರು ಅಂತಿಮ ನೇಮಕಾತಿ ಪಟ್ಟಿಯಲ್ಲಿ ಬಂದಿದೆ ಎಂಬುದರ ಆಧಾರದ ಮೇಲೆ ಅಭ್ಯರ್ಥಿಗೆ ನೇಮಕಾತಿಯ ಯಾವುದೇ ಹಕ್ಕು ದೊರೆಯುವುದಿಲ್ಲ.
4) ಆಯ್ಕೆಯ ಸಂಬಂಧವಾಗಿ ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರ ನಡೆಸಲು ಆಸ್ಪದ ಇರುವುದಿಲ್ಲ.
5) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.
6) **ಈ ಕಚೇರಿಯ ಸಮಸಂಖ್ಯೆಯ ಅಧಿಸೂಚನೆಯ ದಿನಾಂಕ:28–02–2009 ರಂದು ಜಿಲ್ಲೆಯಲ್ಲಿನ ಗ್ರಾಮ ಲೆಕ್ಕಾಧಿಕಾರಿಗಳ ಹುದ್ದೆಗಳನ್ನು ತುಂಬಲು ಹೊರಡಿಸಿದ ಅಧಿಸೂಚನೆಯನ್ನು ರದ್ದುಪಡಿಸಲಾಗಿದೆ. ಈ ಅಧಿಸೂಚನೆಯನ್ವಯ ಸಲ್ಲಿಸಿದ ಅರ್ಜಿಗಳನ್ನು ಹಾಗೂ ಈ ಹಿಂದೆ ಸಲ್ಲಿಸಿದ ಶುಲ್ಕವನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಎಲ್ಲ ಅಭ್ಯರ್ಥಿಗಳು ಪ್ರಸ್ತುತ ಅಧಿಸೂಚನೆಯನ್ವಯ ಹೊಸ ಅರ್ಜಿಗಳನ್ನು ಸಲ್ಲಿಸುವುದು.**

ಭರ್ತಿ ಮಾಡಿದ ಅರ್ಜಿಯನ್ನು ಲಕೋಟೆಯಲ್ಲಿಟ್ಟು, ಸೀಲು ಮಾಡಿ, ಲಕೋಟೆಯ ಮೇಲೆ **"ಗ್ರಾಮ ಲೆಕ್ಕಾಧಿಕಾರಿಗಳ ಹುದ್ದೆ"** ಗೆ ಅರ್ಜಿ ಎಂದು ನಮೂದಿಸಿ, **ಜಿಲ್ಲಾಧಿಕಾರಿಗಳು ವಿಜಾಪೂರ ಜಿಲ್ಲೆ, ವಿಜಾಪೂರ** ಇವರ ವಿಳಾಸಕ್ಕೆ ಸಲ್ಲಿಸತಕ್ಕದ್ದು.

ಕೊನೆಯ ದಿನಾಂಕದ ನಂತರ ಸ್ವೀಕರಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ಆರ್. ಶಾಂತರಾಜ್**

ಪಿ.ಆರ್. 818

ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು
ಗ್ರಾಮ ಲೆಕ್ಕಾಧಿಕಾರಿಗಳ ನೇಮಕಾತಿ ಪ್ರಾಧಿಕಾರ, ವಿಜಾಪೂರ

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಗದಗ–582101**

**ಅಧಿಸೂಚನೆ**

**ನಂ. ಸಿಬ್ಬಂದಿ–1/ವಹಿ/129/2008–09, ದಿನಾಂಕ: 14ನೇ ಸೆಪ್ಟೆಂಬರ್ 2009**

ಸರಕಾರದ ಅಧಿಸೂಚನೆ ಕ್ರಮಾಂಕ: ಕಂಇ/299/ಬಿಎಸ್‌ಸಿ/2006 ದಿನಾಂಕ: 24.07.2009 ರನ್ವಯ ಗ್ರಾಮಲೆಕ್ಕಾಧಿಕಾರಿ ಹುದ್ದೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿದ್ದರಿಂದ ಈ ಹಿಂದೆ ಗ್ರಾಮಲೆಕ್ಕಾಧಿಕಾರಿಗಳ ಖಾಲಿ ಹುದ್ದೆಗಳನ್ನು ನೇರನೇಮಕಾತಿ ಮಾಡಲು ಆಹ್ವಾನಿಸಿರುವ ಅರ್ಜಿ ಪ್ರಕ್ರಿಯೆಯನ್ನು ಸರಕಾರವು ತನ್ನ ಅಧಿಸೂಚನೆ ಕ್ರಮಾಂಕ: ಕಂಇ/299/ಬಿಎಸ್‌ಸಿ/2006 ದಿನಾಂಕ: 08.09.2009 ರನ್ವಯ ರದ್ದುಪಡಿಸಿದೆ. ಕಾರಣ, ಈ ಕಾರ್ಯಾಲಯದ ಅಧಿಸೂಚನೆ ಕ್ರಮಾಂಕ: ಸಿಬ್ಬಂದಿ–1/ವಹಿ/129/2008–09 ದಿನಾಂಕ: 28.02.2009 ರಡಿ ಗದಗ ಜಿಲ್ಲೆಯಲ್ಲಿ ಖಾಲಿ ಇರುವ 50 ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ಭರ್ತಿ ಮಾಡಲು ಆಹ್ವಾನಿಸಲಾದ ಅರ್ಜಿ ಪ್ರಕ್ರಿಯೆಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಈಗಾಗಲೇ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ಖುದ್ದು ಈ ಕಾರ್ಯಾಲಯದ ಕೊಠಡಿ ಸಂಖ್ಯೆ 117 ರಲ್ಲಿ ಹಾಜರಾಗಿ ತಮ್ಮ ಗುರುತನ್ನು ಹಾಜರುಪಡಿಸಿ, ಅರ್ಜಿಯೊಂದಿಗೆ ಸಲ್ಲಿಸಿದ ಡಿ.ಡಿ. ಯನ್ನು ಪರತ ಪಡೆದುಕೊಳ್ಳುವುದು.

**ಡಾ|| ಎನ್.ವಿ. ಪ್ರಸಾದ್**

ಪಿ.ಆರ್. 792 ಜಿಲ್ಲಾಧಿಕಾರಿಗಳು, ಗದಗ

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಟೆಂಡರ್ ಪ್ರಕಟಣೆ (ಎರಡನೇ ಕರೆ)**

**(ಸ್ಟಾಂಡರ್ಡ್ ಟೆಂಡರ್ ಡಾಕ್ಯುಮೆಂಟ್ ಕೆಡಬ್ಲ್ಯೂ–1 & 2 ರ ಅನ್ವಯ ಗುತ್ತಿಗೆ ಆಹ್ವಾನ)**

**ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.**

**ಕ್ರ.ಸಂ.ಸನೀ.ವಿ.ಬೆಳಗಾವಿ/ಸ.ಇಂ./ಟೆಂಡರ್/2009–10/3072, ದಿನಾಂಕ: 11ನೇ ಸೆಪ್ಟೆಂಬರ್ 2009**

1. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ–2000ರ ಅಡಿಯಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ಅರ್ಹ ಗುತ್ತಿಗೆದಾರರಿಂದ ಗುತ್ತಿಗೆಯನ್ನು "ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ" ಇವರಿಂದ ಆಹ್ವಾನಿಸಲಾಗಿದೆ. ಗುತ್ತಿಗೆ ಪಡೆಯಲು ಕನಿಷ್ಠ ಅವಶ್ಯಕ ಅರ್ಹತೆಗಳಿಗಾಗಿ ಗುತ್ತಿಗೆದಾರರು ಸೂಚನೆಗಳಲ್ಲಿ ಕಲಂ–3ನ್ನು ಸೂಕ್ಷ್ಮವಾಗಿ ಗಮನಿಸುವಂತೆ ಸೂಚಿಸಲಾಗಿದೆ.
2. ದಿನಾಂಕ:14.10.09 ರಿಂದ 16.10.09ರ ಒಳಗಿನ ಅವಧಿಯಲ್ಲಿ (ಕಛೇರಿ ಕಾರ್ಯಾವಧಿಯಲ್ಲಿ) ಈ ಕೆಳಗೆ ಕಾಣಿಸಿದ ಶುಲ್ಕವನ್ನು (ಹಿಂದಿರುಗಿಸಲಾಗದ) ಯಾವುದಾದರೂ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದ, ಬೆಳಗಾವಿಯಲ್ಲಿ ನಗದೀಕರಣ ಮಾಡಬಹುದಾದ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಹೆಸರಿನಲ್ಲಿ ಪಡೆಯಲಾದ ಡಿ.ಡಿ., ಪೇ ಆರ್ಡರ್ ಅಥವಾ ನಗದು ರೂಪದಲ್ಲಿ ತುಂಬಿ ಖಾಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಛೇರಿಯಿಂದ ಪಡೆದುಕೊಳ್ಳಬೇಕು. ಗುತ್ತಿಗೆಗೆ ಸಂಬಂಧಿಸಿದ ಎಲ್ಲ ವಿವರಗಳನ್ನು ಆಸಕ್ತ ಗುತ್ತಿಗೆದಾರರು ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಛೇರಿಯಲ್ಲಿ ಪಡೆದುಕೊಳ್ಳಬೇಕು. ಗುತ್ತಿಗೆ ಪತ್ರಗಳನ್ನು ನೊಂದಾಯಿತ ಅಂಚೆ/ವೇಗದ ಅಂಚೆ ಮೂಲಕ ಪಡೆಯಲು ಇಚ್ಛಿಸಿದಲ್ಲಿ ರೂ.200.00ಗಳ ಹೆಚ್ಚುವರಿ ಶುಲ್ಕವನ್ನು ಭರಿಸಬೇಕಾಗುತ್ತದೆ. ಗುತ್ತಿಗೆ ಪತ್ರಗಳನ್ನು ಅಂಚೆ ಮೂಲಕ ಪಡೆಯುವಾಗ ವಿಳಂಬವಾದಲ್ಲಿ ಅಥವಾ ಗುತ್ತಿಗೆ ಪತ್ರಗಳು ಸ್ವೀಕೃತವಾಗದಿದ್ದಲ್ಲಿ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರು ಹೊಣೆಗಾರರಾಗುವುದಿಲ್ಲ.
3. ಕಾಮಗಾರಿಗಾಗಿ ನಿರ್ದಿಷ್ಟಪಡಿಸಿದ ಈ ಕೆಳಗೆ ನಮೂದಿಸಿದ ಮುಂಗಡ ಠೇವಣಿಯನ್ನು ಗುತ್ತಿಗೆ ಪತ್ರಗಳೊಂದಿಗೆ ಸಲ್ಲಿಸತಕ್ಕದ್ದು. ಗುತ್ತಿಗೆ ಪತ್ರಗಳಲ್ಲಿ ನಿರ್ದಿಷ್ಟಪಡಿಸಿರುವ ಯಾವುದಾದರೊಂದು ರೂಪದಲ್ಲಿ ಗುತ್ತಿಗೆ ಅರ್ಹತಾ ಅವಧಿಗಿಂತ 45 ದಿನಗಳ ಹೆಚ್ಚುವರಿ ಅವಧಿಯನ್ನು (ಒಟ್ಟಾರೆ 135 ದಿನಗಳ ಅವಧಿ) ಅರ್ಹತಾ ಅವಧಿಯಾಗಿ

ಹೊಂದಿರುವ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಹೆಸರಿನಲ್ಲಿ ಪಡೆದ ಮತ್ತು ಬೆಳಗಾವಿಯಲ್ಲಿ ನಗದೀಕರಣವಾಗುವ ಮುಂಗಡ ಠೇವಣಿಯನ್ನು ಸಲ್ಲಿಸಬೇಕು.

4. ಭರ್ತಿ ಮಾಡಿದ ಗುತ್ತಿಗೆ ಪತ್ರಗಳನ್ನು ದಿನಾಂಕ: 23.10.09ರ ಮಧ್ಯಾಹ್ನ 16.00 ಘಂಟೆಯೊಳಗಾಗಿ (ಕಛೇರಿ ಕಾರ್ಯಾವಧಿಯಲ್ಲಿ) ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಾರ್ಯಾಲಯದಲ್ಲಿ ಸ್ವೀಕರಿಸಲಾಗುವುದು. ಮತ್ತು ಸಾಧ್ಯವಾದಲ್ಲಿ ಅಂದೇ 16.30 ಘಂಟೆಗೆ ಅಥವಾ ಬೇರೆ ಸೂಕ್ತ ದಿನಾಂಕದಂದು ಆಸಕ್ತರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಾರ್ಯಾಲಯದಲ್ಲಿ ತೆರೆಯಲಾಗುವುದು. ಮೇಲೆ ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ಅಥವಾ ಘೋಷಿತ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.

5. ಇನ್ನುಳಿದ ವಿವರಗಳನ್ನು ಹಾಗೂ ನಿಯಮಗಳನ್ನು ಮಾದರಿ ಗುತ್ತಿಗೆ ದಾಖಲೆ (ಕೆಡಬ್ಲ್ಯೂ–1 ಮತ್ತು 2)ದಲ್ಲಿ ವಿವರಿಸಲಾಗಿದ್ದು ಗುತ್ತಿಗೆದಾರರು ನಿಯಮಾವಳಿಗಳನ್ನು ಸಂಪೂರ್ಣ ಅಭ್ಯಸಿಸಿ ಅರ್ಥೈಸಿಕೊಳ್ಳಲು ಸೂಚಿಸಲಾಗಿದೆ.

| ಕ್ರಮ ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು ಮೊತ್ತ (ರೂ.ಗಳಲ್ಲಿ ) | ಟೆಂಡರ್ ಫಾರಂ ಬೆಲೆ ರೂ.+ತೆರಿಗೆ ಪ್ರತ್ಯೇಕ ಹಿಂದಿರುಗಿ ಸಲಾಗದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| 1 | ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ತಳಕಟ್ನಾಳ ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಘಾಟ ನಿರ್ಮಾಣ | 26.43 | 52900/– | 3000 + Tax | 6 ತಿಂಗಳು (ಮಳೆಗಾಲ ಸೇರಿ) |
| 2 | ಬೆಳಗಾವಿ ಜಿಲ್ಲೆ ಸವದತ್ತಿ ತಾಲ್ಲೂಕಿನ ಹಿರೇಕುಂಬಿ ಗ್ರಾಮದ ಕೆರೆ ಜೀರ್ಣೋದ್ಧಾರ ಕಾಮಗಾರಿ | 24.80 | 50000/– | 3000 + Tax | 6 ತಿಂಗಳು (ಮಳೆಗಾಲ ಸೇರಿ) |
| 3 | ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಹುಣಶ್ಯಾಳ ಪಿ.ಜಿ. ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಘಾಟ ನಿರ್ಮಾಣ | 19.28 | 48200/– | 2000 + Tax | 6 ತಿಂಗಳು (ಮಳೆಗಾಲ ಸೇರಿ) |

**ವ್ಹಿ.ಬಿ. ಕುಲಕರ್ಣಿ**

ಪಿ.ಆರ್. 795 ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ

## ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಟೆಂಡರ್ ಪ್ರಕಟಣೆ (2ನೇ ಕರೆ)

### (ಸ್ಟಾಂಡರ್ಡ್ ಟೆಂಡರ್ ಡಾಕ್ಯೂಮೆಂಟ್ ಕೆಡಬ್ಲ್ಯೂ–2 ರ ಅನ್ವಯ ಗುತ್ತಿಗೆ ಆಹ್ವಾನ)

**ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.**

**ಕ್ರ.ಸಂ.ಸನೀ.ವಿ.ಬೆಳಗಾವಿ/ಸ.ಇಂ./ಟೆಂಡರ್/2009–10/3089, ದಿನಾಂಕ: 14ನೇ ಸೆಪ್ಟೆಂಬರ್ 2009**

1. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ–2000ರ ಅಡಿಯಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ಅರ್ಹ ಗುತ್ತಿಗೆದಾರರಿಂದ ಗುತ್ತಿಗೆಯನ್ನು "ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ" ಇವರಿಂದ ಆಹ್ವಾನಿಸಲಾಗಿದೆ. ಗುತ್ತಿಗೆ ಪಡೆಯಲು ಕನಿಷ್ಠ ಅವಶ್ಯಕ ಅರ್ಹತೆಗಳಿಗಾಗಿ ಗುತ್ತಿಗೆದಾರರು ಸೂಚನೆಗಳಲ್ಲಿ ಕಲಂ–3ನ್ನು ಸೂಕ್ಷ್ಮವಾಗಿ ಗಮನಿಸುವಂತೆ ಸೂಚಿಸಲಾಗಿದೆ.

2. ದಿನಾಂಕ:12.10.09 ರಿಂದ 15.10.09ರ ಒಳಗಿನ ಅವಧಿಯಲ್ಲಿ (ಕಛೇರಿ ಕಾರ್ಯಾವಧಿಯಲ್ಲಿ) ಈ ಕೆಳಗೆ ಕಾಣಿಸಿದ ಶುಲ್ಕವನ್ನು (ಹಿಂದಿರುಗಿಸಲಾಗದ) ಯಾವುದಾದರೂ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದ, ಬೆಳಗಾವಿಯಲ್ಲಿ ನಗದೀಕರಣ ಮಾಡಬಹುದಾದ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಹೆಸರಿನಲ್ಲಿ ಪಡೆಯಲಾದ ಡಿ.ಡಿ., ಪೇ ಆರ್ಡರ್ ಅಥವಾ ನಗದು ರೂಪದಲ್ಲಿ ತುಂಬಿ ಖಾಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ

ವಿಭಾಗ, ಬೆಳಗಾವಿ ಇವರ ಕಛೇರಿಯಿಂದ ಪಡೆದುಕೊಳ್ಳಬೇಕು. ಗುತ್ತಿಗೆಗೆ ಸಂಬಂಧಿಸಿದ ಎಲ್ಲ ವಿವರಗಳನ್ನು ಆಸಕ್ತ ಗುತ್ತಿಗೆದಾರರು ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಛೇರಿಯಲ್ಲಿ ಪಡೆದುಕೊಳ್ಳಬೇಕು. ಗುತ್ತಿಗೆ ಪತ್ರಗಳನ್ನು ನೊಂದಾಯಿತ ಅಂಚೆ/ವೇಗದ ಅಂಚೆ ಮೂಲಕ ಪಡೆಯಲು ಇಚ್ಛಿಸಿದಲ್ಲಿ ರೂ.200.00ಗಳ ಹೆಚ್ಚುವರಿ ಶುಲ್ಕವನ್ನು ಭರಿಸಬೇಕಾಗುತ್ತದೆ. ಗುತ್ತಿಗೆ ಪತ್ರಗಳನ್ನು ಅಂಚೆ ಮೂಲಕ ಪಡೆಯುವಾಗ ವಿಳಂಬವಾದಲ್ಲಿ ಅಥವಾ ಗುತ್ತಿಗೆ ಪತ್ರಗಳು ಸ್ವೀಕೃತವಾಗದಿದ್ದಲ್ಲಿ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರು ಹೊಣೆಗಾರರಾಗುವುದಿಲ್ಲ.

3. ಕಾಮಗಾರಿಗಾಗಿ ನಿರ್ದಿಷ್ಟಪಡಿಸಿದ ಈ ಕೆಳಗೆ ನಮೂದಿಸಿದ ಮುಂಗಡ ಠೇವಣಿಯನ್ನು ಗುತ್ತಿಗೆ ಪತ್ರಗಳೊಂದಿಗೆ ಸಲ್ಲಿಸತಕ್ಕದ್ದು. ಗುತ್ತಿಗೆ ಪತ್ರಗಳಲ್ಲಿ ನಿರ್ದಿಷ್ಟಪಡಿಸಿರುವ ಯಾವುದಾದರೊಂದು ರೂಪದಲ್ಲಿ ಗುತ್ತಿಗೆ ಅರ್ಹತಾ ಅವಧಿಗಿಂತ 45 ದಿನಗಳ ಹೆಚ್ಚುವರಿ ಅವಧಿಯನ್ನು (ಒಟ್ಟಾರೆ 135 ದಿನಗಳ ಅವಧಿ) ಅರ್ಹತಾ ಅವಧಿಯಾಗಿ ಹೊಂದಿರುವ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಹೆಸರಿನಲ್ಲಿ ಪಡೆದ ಮತ್ತು ಬೆಳಗಾವಿಯಲ್ಲಿ ನಗದೀಕರಣವಾಗುವ ಮುಂಗಡ ಠೇವಣಿಯನ್ನು ಸಲ್ಲಿಸಬೇಕು.

4. ಭರ್ತಿ ಮಾಡಿದ ಗುತ್ತಿಗೆ ಪತ್ರಗಳನ್ನು ದಿನಾಂಕ: 22.10.09ರ ಸಂಜೆ 16.00 ಘಂಟೆಯೊಳಗಾಗಿ (ಕಛೇರಿ ಕಾರ್ಯಾವಧಿಯಲ್ಲಿ) ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಾರ್ಯಾಲಯದಲ್ಲಿ ಸ್ವೀಕರಿಸಲಾಗುವುದು. ಮತ್ತು ಸಾಧ್ಯವಾದಲ್ಲಿ ಅಂದೇ 16.30 ಘಂಟೆಗೆ ಅಥವಾ ಬೇರೆ ಸೂಕ್ತ ದಿನಾಂಕದಂದು ಆಸಕ್ತರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಾರ್ಯಾಲಯದಲ್ಲಿ ತೆರೆಯಲಾಗುವುದು. ಮೇಲೆ ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ಅಥವಾ ಘೋಷಿತ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.

5. ಇನ್ನುಳಿದ ವಿವರಗಳನ್ನು ಹಾಗೂ ನಿಯಮಗಳನ್ನು ಮಾದರಿ ಗುತ್ತಿಗೆ ದಾಖಲೆ (ಕೆಡಬ್ಲ್ಯೂ–2)ದಲ್ಲಿ ವಿವರಿಸಲಾಗಿದ್ದು ಗುತ್ತಿಗೆದಾರರು ನಿಯಮಾವಳಿಗಳನ್ನು ಸಂಪೂರ್ಣ ಅಭ್ಯಸಿಸಿ ಅರ್ಥೈಸಿಕೊಳ್ಳಲು ಸೂಚಿಸಲಾಗಿದೆ.

| ಕ್ರಮ ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು ಮೊತ್ತ (ರೂ.ಗಳಲ್ಲಿ ) | ಟೆಂಡರ್ ಫಾರಂ ಬೆಲೆ ರೂ.+ತೆರಿಗೆ ಪ್ರತ್ಯೇಕ ಹಿಂದಿರುಗಿ ಸಲಾಗದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| 1 | ಬೆಳಗಾಂವ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ರಾಶಿಂಗ್ ಸಣ್ಣ ನೀರಾವರಿ ಕೆರೆ ಅಭಿವೃದ್ಧಿ | 27.27 | 54600/– | 2800 + Tax | 4 ತಿಂಗಳು (ಮಳೆಗಾಲ ಸೇರಿ) |

**ವ್ಹಿ.ಬಿ. ಕುಲಕರ್ಣಿ**

ಪಿ.ಆರ್. 797 ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ

## ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

### ಅಲ್ಪಾವಧಿ ಟೆಂಡರ್ ಆಹ್ವಾನ ಪ್ರಕಟಣೆ (ಐ.ಎಫ್.ಟಿ.ಕೆ.ಡಬ್ಲ್ಯು–4) ಸಣ್ಣ ನೀರಾವರಿ ವಿಭಾಗ, ಬಳ್ಳಾರಿ

**ಐ.ಎ.ಪಟ ನಂ:ಇಇ/ಎಂ.ಐ.ಡಿ/ಬಳ್ಳಾರಿ/ಕಿ.ಇಂ/4702 ಪ್ಲಾನ್/2009–10/1791, ದಿನಾಂಕ: 27ನೇ ಆಗಸ್ಟ್ 2009**

1. ಕಾರ್ಯನಿರ್ವಾಹಕ ಇಂಜಿನೀಯರು, ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಕಾರ್ಯಾಲಯದಿಂದ ಅರ್ಹ ಗುತ್ತಿಗೆದಾರರಿಂದ ಈ ಕೆಳಗೆ ಕಾಣಿಸಿದ ಕಾಮಗಾರಿಯ ಟೆಂಡರ್ ಆಹ್ವಾನಿಸಲಾಗಿದೆ. ಗುತ್ತಿಗೆದಾರರು ಕಾಮಗಾರಿಗೆ ಟೆಂಡರ್ ಸಲ್ಲಿಸಬಹುದಾಗಿದ್ದು, ಕೆ.ಟಿ.ಪಿ.ಪಿ. ಆಕ್ಟ್ ನಿಯಮ–28ರ ಅನುಸಾರ ದ್ವಿಲಕೋಟೆ ಪದ್ಧತಿಯನ್ನು ಅನುಸರಿಸಲಾಗುವುದು. ಗುತ್ತಿಗೆದಾರರು ಟೆಂಡರನ್ನು ಎರಡು ಪ್ರತ್ಯೇಕ ಲಕೋಟೆಯಲ್ಲಿ ಮೊಹರು ಮಾಡಿ ಸಲ್ಲಿಸಬೇಕಾಗಿದ್ದು, ಮೊದಲನೇ ಲಕೋಟೆಯಲ್ಲಿ ಮುಂಗಡ ಠೇವಣಿ ಮೊತ್ತ ಮತ್ತು ಕಾಮಗಾರಿ ಕೈಗೊಳ್ಳಲು ಸಾಮರ್ಥ್ಯ ಬಗ್ಗೆ ವಿವರ (ಐ.ಟಿ.ಟಿ.ಕ್ಲಾಜ್–3 ಮತ್ತು 6ರ ಅನುಸಾರ)ಗಳನ್ನು ಸಲ್ಲಿಸಬೇಕಾಗಿದ್ದು, ಈ ಲಕೋಟೆಯನ್ನು ಮೊದಲು ತೆರೆಯಲಾಗುವುದು. ಎರಡನೇ ಲಕೋಟೆಯಲ್ಲಿ ಟೆಂಡರ್ ದರ ವಿವರವನ್ನು ಸಲ್ಲಿಸಬೇಕಾಗಿದ್ದು, ಈ ಲಕೋಟೆಯನ್ನು ಗುತ್ತಿಗೆದಾರರು ಕಾಮಗಾರಿ ಕೈಗೊಳ್ಳಲು ಶಕ್ಯತೆಯ ಅರ್ಹತೆ ಹೊಂದಿದಲ್ಲಿ ಮಾತ್ರ ತೆರೆಯಲಾಗುವುದು. ಗುತ್ತಿಗೆದಾರರು, ಕಾಮಗಾರಿಯ ಗುತ್ತಿಗೆ ಅರ್ಹತೆ ಹೊಂದಲು ಕ್ಲಾಜ್–3ರಲ್ಲಿ ನಿರ್ದೇಶಿಸಿರುವ ಕನಿಷ್ಠ ಅರ್ಹತೆಯ ಬಗ್ಗೆ ಸಂಪೂರ್ಣ ಮಾಹಿತಿ ಮಾಡಿಕೊಳ್ಳಲು ಉಪದೇಶಿಸಲಾಗಿದೆ.

2. ಗುತ್ತಿಗೆದಾರರು ಈ ಕೆಳಗಿನ ಟೇಬಲ್‌ನಲ್ಲಿ ತಿಳಿಸಿರುವ ಟೆಂಡರ್ ಫಾರ್ಮಿನ ಬೆಲೆಯನ್ನು (ಮರಳಿ ಹಿಂತಿರುಗಿಸಲಾಗದ) ಬಳ್ಳಾರಿಯಲ್ಲಿ ಪಾವತಿಯಾಗುವಂತೆ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಇವರ ಹೆಸರಿನಲ್ಲಿ ಡಿಮ್ಯಾಂಡ್ ಡ್ರಾಫ್ಟ್/ರಾಷ್ಟ್ರೀಕೃತ/ಶೆಡ್ಯುಲ್ಡ್ ಬ್ಯಾಂಕಿನ ಪೇ ಆರ್ಡರನ್ನು ಸಂದಾಯ ಮಾಡಿ ದಿನಾಂಕ: 13.10.2009 ರಿಂದ 14.10.2009ರವರೆಗೆ ಟೆಂಡರ್ ಡಾಕ್ಯುಮೆಂಟ್ಸ್ ಖರೀದಿಸಬಹುದು. ಆಸಕ್ತ ಗುತ್ತಿಗೆದಾರರು ಹೆಚ್ಚುವರಿ ಮಾಹಿತಿಯನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು. ಗುತ್ತಿಗೆದಾರರ ಕೋರಿಕೆಯ ಮೇರೆಗೆ ಅಂಚೆ ವೆಚ್ಚ ರೂ. 500.00 (ಪ್ರತಿ ಕೆಲಸಕ್ಕೆ) ಗಳನ್ನು ಗುತ್ತಿಗೆದಾರರಿಂದ ಭರಣಾ ಮಾಡಿಕೊಂಡು ಟೆಂಡರ್ ಡಾಕ್ಯುಮೆಂಟ್ಸ್‌ಗಳನ್ನು ನೊಂದಾಯಿತ ಅಂಚೆ / ಸ್ಪೀಡ್ ಪೋಸ್ಟ್ ಮೂಲಕ ಕಳುಹಿಸಲಾಗುವುದು. ಸದರಿ ಟೆಂಡರ್ ಡಾಕ್ಯುಮೆಂಟ್ಸ್ ಅಂಚೆಯಲ್ಲಿ ವಿಳಂಬದಲ್ಲಿ ಸರಿಯಾದ ಸಮಯದಲ್ಲಿ ಗುತ್ತಿಗೆದಾರರಿಗೆ ತಲುಪದೆ ಇದ್ದಲ್ಲಿ ಇದಕ್ಕೆ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಇವರು ಹೊಣೆಗಾರರಾಗುವುದಿಲ್ಲ ಇದಕ್ಕೆ ಗುತ್ತಿಗೆದಾರರೆ ಹೊಣೆಗಾರರಾಗಿರುತ್ತಾರೆ.
3. ಟೆಂಡರ್ ದಸ್ತಾವೇಜುಗಳ ಜೊತೆಗೆ ಮುಂಗಡ ಠೇವಣಿ ಹಣವನ್ನು ಕೆಳಗಿನ ಟೇಬಲ್‌ನಲ್ಲಿ ತಿಳಿಸಿದ ಮೊತ್ತಕ್ಕೆ ಹಾಗೂ ನಿಗದಿತ ಯಾವುದೇ ರೂಪದಲ್ಲಿ ಗುತ್ತಿಗೆ ಸಲ್ಲಿಸಿದ ದಿನಾಂಕದಿಂದ ಚಲಾವಣೆಯಲ್ಲಿರುವ ಗುತ್ತಿಗೆ ಅವಧಿಗಿಂತ 45 ದಿನಗಳವರೆಗೆ ಹೆಚ್ಚಿನ ಚಲಾವಣೆಯಲ್ಲಿರುವಂತೆ ಟೆಂಡರ್‌ನೊಂದಿಗೆ ಲಗತ್ತಿಸಿ ಸಲ್ಲಿಸಬೇಕು.
4. ಟೆಂಡರ್‌ಗಳನ್ನು ಮುಖ್ಯ ಇಂಜಿನೀಯರವರ ಕಛೇರಿ ಸಣ್ಣ ನೀರಾವರಿ (ಉ)ವಲಯ, ಬಿಜಾಪುರ ಇಲ್ಲವೆ ಅಧೀಕ್ಷಕ ಇಂಜಿನೀಯರರು, ಸಣ್ಣ ನೀರಾವರಿ ವೃತ್ತ ಕಛೇರಿ ಗುಲ್ಬರ್ಗಾ ಇಲ್ಲವೆ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಇವರ ಕಛೇರಿಯಲ್ಲಿ ದಿನಾಂಕ:20.10.2009ರಂದು ಸಾಯಂಕಾಲ 4.00 ಗಂಟೆಯ ಒಳಗಾಗಿ ಸಲ್ಲಿಸತಕ್ಕದ್ದು, ಒಂದನೇ ಲಕೋಟೆಯನ್ನು ದಿನಾಂಕ: 22.10.2009 ರಂದು ಬೆಳಿಗ್ಗೆ 11.00 ಗಂಟೆಗೆ ಉಪಸ್ಥಿತರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ತೆರೆದು ಓದಲಾಗುವುದು. ಟೆಂಡರ್‌ಗಳನ್ನು ಸ್ವೀಕರಿಸುವ ದಿವಸವು ಸಾರ್ವತ್ರಿಕ ರಜಾ ದಿವಸ ಎಂದು ಘೋಷಿಸಿದಲ್ಲಿ ಮುಂದಿನ ಕೆಲಸದ ದಿವಸವೆಂದು ಪರಿಗಣಿಸಲಾಗುವುದು.
5. ದಿನಾಂಕ: 16.10.2009ರಂದು ಬೆಳಿಗ್ಗೆ 11.00 ಗಂಟೆಗೆ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಕಛೇರಿಯಲ್ಲಿ ಟೆಂಡರ್ ಕ್ಲಾಜ್–8.2 ರ ಅನುಸಾರ ಗುತ್ತಿಗೆದಾರರ ಯಾವುದೇ ಮಾಹಿತಿಗಳಿಗೆ ಸ್ಪಷ್ಟೀಕರಿಸಲು ಟೆಂಡರ್ ಪೂರ್ವ ಸಭೆಯನ್ನು ಜರುಗಿಸಲಾಗುವುದು.
6. ಇನ್ನುಳಿದ ಮಾಹಿತಿಗಳನ್ನು ಟೆಂಡರ್ ಡಾಕ್ಯುಮೆಂಟ್ಸ್‌ದಿಂದ ಪಡೆಯಬಹುದು.

**ಟೇಬಲ್**

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ.ಗಳಲ್ಲಿ) | ಮುಂಗಡ ಠೇವಣಿ ಹೆಚ್ಚು / ಕಡಿಮೆ (ರೂ.ಗಳಲ್ಲಿ) | ಟೆಂಡರ್ ಡಾಕುಮೆಂಟ್ಸ್ ಬೆಲೆ (ರೂ.ಗಳಲ್ಲಿ) | ಕಾಮಗಾರಿ ಪೂರ್ಣಗೊಳಿಸಲು ನಿಗದಿಪಡಿಸಿದ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|
| 1. | ಬಳ್ಳಾರಿ ಜಿಲ್ಲೆ ಸಿರುಗುಪ್ಪ ತಾಲ್ಲೂಕಿನ ಹಾಗಲೂರು ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ | 1,70,00000/– | 2,55,000/– | 25,000/– | 18 ತಿಂಗಳು |

**ಎ.ಕೆ. ಅಣ್ಣಪ್ಪ**
ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬಳ್ಳಾರಿ

**WATER RESOURCES DEPARTMENT (Minor Irrigation)**

**Office of the Executive Engineer, Minor Irrigation Division, Bellary**

**INVITATION FOR TENDERS (IFT) (KW-4)**

**SHORT TERM TENDER NOTIFICATION (TWO COVER SYSTEM)**

**(As per Standard Bid Document)**

**No:EE/MID/BLY/JE/4702 Plan / 2008-09/1791, IFT NO: 1791, Dated: 27th August 2009**

1. The Executive Engineer, M.I.Division, Bellary on behalf of the Governor of Karnataka invites tenders from eligible tenderers, for the construction of works detailed in the table below. The

tenderers may submit tenders for any or all of the works given in the Table. Two cover Tender procedure as per Rule 28 of the KTPP Act shall be followed. The Tenderers are required to submit two separate sealed covers, one containing the Earnest money deposit and the details of their capability to under take the tender (as detailed in ITT clause 3 and 6), which will be opened first and the second cover containing the price tender which will be opened only if the Tenderer is found to be qualified to execute the tendered works. The Tenderers are advised to note the minimum qualification criteria specified in clause 3 of the Instruction to Tenderers to qualify for award of the contract.

2. Tender documents may be purchased from the office of Executive Engineer, M.I.Division, Bellary from 13.10.2009 to 14.10.2009 for a non-refundable fee (for two sets) as indicated in the Table below, in the form of Cash or Demand Draft/Pay Order on any Nationalized / Scheduled Bank payable at SBM Bellary in favour of Executive Engineer, M.I.Division, Bellary Interested tenderers may obtain further information at the same address. Tender documents requested by mail will be dispatched by registered / speed post on payment of an extra amount of Rs.500/- The Executive Engineer will not be held responsible for the postal delay if any, in the delivery of the documents or non receipt of the same.
3. Tenders must be accompanied by earnest money deposit specified for the work in the Table below. Earnest money deposit will have to be in any one of the forms as specified in the Tender document and shall have to be valid for 45 days beyond the validity of the tender.
4. Tenders must be delivered to Executive Engineer, M.I.Division, Bellary at any of the following offices 1) EE.MI Division, Bellary 2) SE, MI Circle, Gulbarga. 3) CE, MI (N) Zone, Bijapur on or before 16.00 hours on 20.10.2009 and First Cover Tenders will be opened on 22.10.2009 at 11.00 hours, in the presence of the Tenderers who wish to attend. If the office happens to be closed on the date of receipt of the tenders as specified, the tenders will be received at the above offices on the next working day and will be opened at the office of the Executive Engineer, M.I.Division, Bellary on the following working day at the same time.
5. A pre-tender meeting will be held on 16.10.2009 at 11.00 hours at the office of the Executive Engineer, M.I.Division, Bellary to clarify the issues if any, and answer questions on any matter that may be raised at that stage as stated in clause 8.2 of "Instructions to Tenderers" of the tender document.
6. Other details can be seen in the tender documents.

**TABLE**

| Package No. | Name of work | Approximate value of work (Rs) | Earnest Money Deposit (Rs) | Cost of Document (Rs) | Period of completion |
|---|---|---|---|---|---|
| 1 | Construction of Lift Irrigation Scheme near Hagalur village in Siruguppa Taluk, Bellary District | 1,70,00000/- | 2,55,000/- | 25,000/- | 18 months (including monsoon) |

**A.K. ANNAPPA**

P.R. 788 Executive Engineer, M.I.Division, Bellary.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಪ್ರಾದೇಶಿಕ ಅರಣ್ಯ ವಿಭಾಗ, ತುಮಕೂರು

## ಅರಣ್ಯ ಕಾಮಗಾರಿಗಳ ಟೆಂಡರ್

**ಸಂಖ್ಯೆ: ಎ.ಅಕಾ/ಟೆಂಡರ್/ವಿವ.9/2009–10, ದಿನಾಂಕ: 9ನೇ ಸೆಪ್ಟೆಂಬರ್ 2009.**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2009–10ನೇ ಸಾಲಿನಲ್ಲಿ ತುಮಕೂರು ಪ್ರಾದೇಶಿಕ ಅರಣ್ಯ ವಿಭಾಗದ ವ್ಯಾಪ್ತಿಗೆ ಒಳಪಡುವ ವಲಯಗಳಲ್ಲಿನ ಈ ಕೆಳಕಂಡ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಈ ವಿಭಾಗದಲ್ಲಿ 2009–10ನೇ ಸಾಲಿಗೆ ನೊಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಪ್ರತಿಯೊಂದು ಕಾಮಗಾರಿಗೆ ಪ್ರತ್ಯೇಕವಾಗಿ ವಲಯವಾರು ಮೊಹರಾದ ಪ್ರತಿ ಕಾಮಗಾರಿಗೆ ಶೇಕಡವಾರು ಟೆಂಡರ್ ಕರೆಯಲಾಗಿದೆ. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ 23–10–2009 ರಂದು 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು, ದಿನಾಂಕ 23–10–2009 ರಂದು ಯಾವ ಕಾಮಗಾರಿಗೂ ಟೆಂಡರ್‌ಗಳು ಬಾರದೇ ಇದ್ದಲ್ಲಿ ಮತ್ತೆ ಎರಡನೇ ಬಾರಿಗೆ ದಿನಾಂಕ 03–11–2009 ರಂದು 3.00 ಗಂಟೆಗೆ ಸ್ವೀಕರಿಸಲಾಗುವುದು. ಮತ್ತೆ ಪ್ರತ್ಯೇಕವಾಗಿ ಪ್ರಕಟಣೆ ನೀಡಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ ಸಂ | ಟೆಂಡರ್ ಹೊರಡಿಸಿದ ಪ್ರಾಧಿಕಾರ | ಟೆಂಡರ್ ಕ್ರಮಾಂಕ ಹಾಗೂ ದಿನಾಂಕ | ವಲಯ | ಯೋಜನೆ | ಕಾಮಗಾರಿ ವಿವರ | | ಸ್ಥಳ | ಮಾದರಿ | ಭೌತಿಕ ಪರಿಮಾಣ (ಹೆ./ಕಿಮೀ. ಗಳಲ್ಲಿ) | ಅಂದಾಜು ಮೊತ್ತ | ನಿಗದಿ ಪಡಿಸಿದ ಇಎಂಡಿ ಮೊತ್ತ. |
|---|---|---|---|---|---|---|---|---|---|---|---|
| 1 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ವಿಭಾಗ, ತುಮಕೂರು. | ಎ.ಅಕಾ/ ಟೆಂಡರ್/ ವಿವ9/ 2009–10, ದಿನಾಂಕ 09–09–2009. | ಕುಣಿಗಲ್ | KSFMBC | 1 | 2009–10ನೇ ಸಾಲಿನಲ್ಲಿ ಮುಂಗಡ ಕಾಮಗಾರಿಗಳು (ಪಿಟ್ಸ್ ಅಗೆತ, ಜಾನುವಾರು ನಿರೋಧಕ ಕಂದಕಗಳನ್ನು ಮ್ಯಾನುಯಲ್ ಅಥವಾ ಜೆ.ಸಿ.ಬಿ. ಯಂತ್ರದ ಮೂಲಕ ತೆಗೆಯುವುದು) | ಇಪ್ಪಾಡಿ ಮೀಸಲು ಅರಣ್ಯ | 02 | 50 | 448700 | 11200 |
| 2 | –"– | –"– | ಕುಣಿಗಲ್ | –"– | 2 | 2009–10ನೇ ಸಾಲಿನಲ್ಲಿ ಮಣ್ಣು ಸಂರಕ್ಷಣಾ ಕಾಮಗಾರಿಗಳಾದ ನಾಲಾಬಂಡ್ ಅಥವಾ ಪರ್ಕ್ಯೂಲೇಷನ್ ಪಾಂಡ್ ಗಲ್ಲಿಚೆಕ್ಸ್, ಚೆಕ್‌ಡ್ಯಾಂ ಅರ್ಥರನ್‌ಬಂಡ್ಸ್ of required Nos ನಿರ್ಮಾಣ ಮಾಡುವುದು. | ಇಪ್ಪಾಡಿ ಮೀಸಲು ಅರಣ್ಯ | 02 | 50 | 159500 | 4000 |

| ಕ್ರ. ಸಂ. | ಯೋಜನೆ | ಕಾಮಗಾರಿಗಳ ಪ್ರದೇಶ ಹಾಗೂ ವಿಸ್ತೀರ್ಣ | ಕಾಮಗಾರಿಗಳ ವಿವರ | | ಡಿ. 80 ಯಂತ್ರದಿಂದ ರಿಪ್ಪಿಂಗ್ ಮಾಡುವುದು | ಭೂ ಮತ್ತು ಜಲ ಸಂರಕ್ಷಣಾ ಕಾಮಗಾರಿಗಳು (ಮಾನವ ನಿರ್ಮಿತ) | ಅಂದಾಜು ಮೊತ್ತ ರೂ.ಗಳಲ್ಲಿ |
|---|---|---|---|---|---|---|---|
| | | | 0.60 ಮೀ x 0.60 ಮೀ x 0.60 ಮೀ ಆಳತೆಯ ಗುಂಡಿ ತೆಗೆಯುವುದು. (ಮಾನವ ನಿರ್ಮಿತ) | (1.5 ಮೀ+1.00ಮೀ) 1.00 x ಮೀ 2 ಮೀ ಜಾನುವಾರು ನಿರೋಧಕ ಗುಂಡಿ ತೆಗೆಯುವುದು (ಮಾನವ ನಿರ್ಮಿತ) | | | |
| 19 | ಕೆ.ಎಸ್.ಎಫ್. ಎಂ.ಬಿ.ಸಿ. ಮಾದರಿ–04 | ಯಡೇಹಳ್ಳಿ ಸ.ನಂ: 253. 25 ಹೆ. | 540 cum (2500 ಗುಂಡಿಗಳು) ರೂ. 31444.00 | 2250 Cum ರೂ. 131017.00 | 53750 Rmtr. ರೂ. 193500.00 | ನಾಲಾ ಬದು/ ಗಲ್ಲಿ ಚೆಕ್ಸ್ ರೂ. 140750.00 | 496711.00 |
| 20 | ಕೆ.ಎಸ್.ಎಫ್. ಎಂ.ಬಿ.ಸಿ. ಮಾದರಿ–04 | ಹಲವಾಗಿಲು ಸ.ನಂ: 616. 25 ಹೆ. | 540 cum (2500 ಗುಂಡಿಗಳು) ರೂ. 31444.00 | 2250 Cum ರೂ. 131017.00 | 53750 Rmtr. ರೂ. 193500.00 | ನಾಲಾ ಬದು/ ಗಲ್ಲಿ ಚೆಕ್ಸ್ ರೂ. 140750.00 | 496711.00 |
| 21 | ಡಿ.ಡಿ.ಎಫ್. | ಹಲಗಿಲವಾಡ ಆರ್.ಎಫ್. ಕಡತಿ ಸ.ನಂ: 381 ಸಿ 30 ಹೆ. | – | 2385 Cum ರೂ. 138878.00 | 51600 Rmtr. ರೂ. 185760.00 | – | 324638.00 |
| 22 | ಕೆ.ಎಫ್.ಡಿ.ಎಫ್. | ಜಾಜಿಕಲ್‌ಗುಡ್ಡ ಆರ್.ಎಫ್. ಚಿಗಟೇರಿ ಸ.ನಂ: 2 35 ಹೆ. | – | 3150 cum. ರೂ.183424.00 | 75250 Rmtr. ರೂ. 270900.00 | ನಾಲಾ ಬದು/ ಗಲ್ಲಿ ಚೆಕ್ಸ್ ರೂ. 52185.00 | 506509.00 |
| 23 | ಟಿ.ಬಿ.ಒ.ಎಸ್. | ತೌಡೂರು ಸ.ನಂ: 464 & 3ಎ ಕಂಚಿಕೆರೆ ಬ್ಲಾಕ್ –I 20 ಹೆ. | – | 1600 cum. ರೂ. 93168.00 | 43000 Rmtr. ರೂ. 154800.00 | – | 247968.00 |
| 24 | ಟಿ.ಬಿ.ಒ.ಎಸ್. | ತೌಡೂರು ಸ.ನಂ: 464 & 3ಎ ಕಂಚಿಕೆರೆ ಬ್ಲಾಕ್ –II 20 ಹೆ. | – | 1600 cum. ರೂ. 93168.00 | 43000 Rmtr. ರೂ. 154800.00 | – | 247968.00 |
| 25 | ಟಿ.ಬಿ.ಒ.ಎಸ್. | ಮಾಚಿಹಳ್ಳಿ ಸ.ನಂ: 382 ಬ್ಲಾಕ್ –I 20 ಹೆ. | – | 1600 cum. ರೂ. 93168.00 | 43000 Rmtr. ರೂ. 154800.00 | – | 247968.00 |
| 26 | ಟಿ.ಬಿ.ಒ.ಎಸ್. | ಮಾಚಿಹಳ್ಳಿ ಸ.ನಂ: 382 ಬ್ಲಾಕ್ –II 20 ಹೆ. | – | 1600 cum. ರೂ. 93168.00 | 43000 Rmtr. ರೂ. 154800.00 | – | 247968.00 |
| | **ಒಟ್ಟು** | | 20520 **cum.** (95000 **ಗುಂಡಿಗಳು**) **ರೂ.** 1194876.00 | 49835 **cum.** **ರೂ.** 2901889.00 | 790350 **Rmtr.** **ರೂ.** 2856060.00 | **ರೂ.** 619485.00 | 7084502.00 |
| | **ಹೊನ್ನಾಳಿ ವಲಯ ಯೂನಿಟ್ ನಂ: 4** | | | | | | |
| 27 | ಕೆ.ಎಸ್.ಎಫ್. ಎಂ.ಬಿ.ಸಿ. ಮಾದರಿ–02 | ಕುದುರೆಕೊಂಡ ಎಸ್.ಎಫ್. ಸ.ನಂ: 31 & 32. 75 ಹೆಕ್ಟೇರ್ | 6480 cum (30000 ಗುಂಡಿಗಳು) ರೂ. 377330.00 | 6750 Cum ರೂ. 393052.00 | – | ನಾಲಾ ಬದು/ ಗಲ್ಲಿ ಚೆಕ್ಸ್ ರೂ. 271050.00 | 1041432.00 |
| | **ಒಟ್ಟು** | | **6480 cum (30000 ಗುಂಡಿಗಳು) ರೂ. 377330.00** | **6750 Cum ರೂ. 393052.00** | – | **ನಾಲಾ ಬದು/ ಗಲ್ಲಿ ಚೆಕ್ಸ್ ರೂ. 271050.00** | **1041432.00** |

**ನಿಬಂಧನೆಗಳು :**

1) ಟೆಂಡರ್‌ನಲ್ಲಿ ಭಾಗವಹಿಸುವ ಗುತ್ತಿಗೆದಾರರು 2009–10ನೇ ಸಾಲಿಗೆ ಈ ವಿಭಾಗದಲ್ಲಿ ನೊಂದಾಯಿತ ಗುತ್ತಿಗೆದಾರರಾಗಿರತಕ್ಕದ್ದು.
2) ಟೆಂಡರ್ ದಿನಾಂಕ: 15–10–2009 ರಂದು ಬೆಳಿಗ್ಗೆ 10.00 ಗಂಟೆಯಿಂದ ಮಧ್ಯಾಹ್ನ 1.00 ಗಂಟೆಯವರೆಗೆ ಟೆಂಡರ್ ನಮೂನೆಯನ್ನು ಶುಲ್ಕ ರೂ. 225/– ಗಳನ್ನು ಪಾವತಿಸಿ ಪಡೆಯಬಹುದಾಗಿದೆ.
3) ಈ ಗುತ್ತಿಗೆಯಲ್ಲಿ ಅರ್ಹತೆ ಪಡೆಯಲು ಪ್ರತಿ ಗುತ್ತಿಗೆದಾರರು ತಮ್ಮ ಹೆಸರಿನಲ್ಲಿ ಕಳೆದ 5 ವರ್ಷಗಳಲ್ಲಿ ಕನಿಷ್ಠ ನಿರಂತರವಾಗಿ 2 ವರ್ಷ ಅವಧಿಗಳಲ್ಲಿ ಗುತ್ತಿಗೆ ಪಡೆಯಲಿಚ್ಚಿಸುವ ಮೊಬಲಗಿಗೆ ಸಮನಾದ ಕೆಲಸಗಳನ್ನು ತೃಪ್ತಿಕರವಾಗಿ ನಿರ್ವಹಿಸಿದ ಬಗ್ಗೆ ಸಂಬಂಧಿಸಿದ ಉಪ ಅರಣ್ಯ ಅಧಿಕಾರಿಗಳು ನೀಡಿದ ದೃಢೀಕರಣ ಪತ್ರವನ್ನು ಟೆಂಡರ್ ಫಾರಂನೊಂದಿಗೆ ಲಗತ್ತಿಸಿರಬೇಕು.

4) ಗುತ್ತಿಗೆದಾರರು ಅರ್ಜಿಯ ಜೊತೆಯಲ್ಲಿ ಗುತ್ತಿಗೆದಾರರಾಗಿ ನೊಂದಾಯಿತ ಅನುಜ್ಞಾಪತ್ರ ಕಳೆದ ವರ್ಷದ ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆ ತೀರುವಳಿ ದೃಢೀಕರಣ ಪತ್ರಗಳನ್ನು ಸಲ್ಲಿಸಬೇಕು.

5) ಬಿಲ್ ಮೊತ್ತದಲ್ಲಿ ಶೇ 1%ರಂತೆ ಸೆಸ್ ಹಣವನ್ನು ಕಡಿತಗೊಳಿಸಲಾಗುವುದು.

6) ನಿವಾಸದ ದೃಢೀಕರಣಕ್ಕಾಗಿ ಇತ್ತೀಚಿನ ಮತದಾರ ಗುರುತು ಚೀಟಿ ಪತ್ರದ ಪ್ರತಿಯನ್ನು ನೀಡತಕ್ಕದ್ದು.

7) ವ್ಯಾಟ್/ ಟಿನ್ ದೃಢೀಕರಣ ಪತ್ರದ ಸಂಖ್ಯೆ ಮತ್ತು ದಿನಾಂಕದ ವಿವರಗಳನ್ನು ಸಲ್ಲಿಸತಕ್ಕದ್ದು.

8) ಕಳೆದ ಮೂರು ವರ್ಷಗಳಲ್ಲಿ ಆಡಿಟ್ ಮಾಡಿದ ಬ್ಯಾಲೆನ್ಸ್ ಶೀಟ್‌ನ್ನು ಚಾರ್ಟರ್ಡ್ ಅಕೌಂಟೆಂಟ್‌ರವರಿಂದ ದೃಢೀಕರಿಸಿದ ಪ್ರತಿಯನ್ನು ಲಗತ್ತಿಸಬೇಕು.

9) ಕಳೆದ ಮೂರು ವರ್ಷಗಳಲ್ಲಿ ಗುತ್ತಿಗೆ ವಹಿವಾಟು ನಡೆಸಿದ ಲೆಕ್ಕ ಪತ್ರ ವಿವರಗಳನ್ನೊಳಗೊಂಡ, ಚಾರ್ಟರ್ಡ್ ಅಕೌಂಟೆಂಟ್‌ರವರಿಂದ ದೃಢೀಕರಿಸಿದ ಪತ್ರ ಸಲ್ಲಿಸುವುದು.

10) ಟೆಂಡರ್‌ದಾರರು ಸೂಚಿಸಿದ ಟೆಂಡರ್ ಮೊತ್ತವು ಮಂಜೂರಾದ ಮೊತ್ತಕ್ಕಿಂತಲೂ ಕಡಿಮೆ ಇದ್ದಲ್ಲಿ, ವ್ಯತ್ಯಾಸದ ಮೊತ್ತವನ್ನು ಡಿ.ಡಿ. ರೂಪದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಹೆಸರಿಗೆ ಕರಾರು ಒಪ್ಪಂದ ಮಾಡಿಕೊಳ್ಳುವ ಸಮಯದಲ್ಲಿ ಸಲ್ಲಿಸಬೇಕು.

11) ಟೆಂಡರ್ ನಮೂನೆಯ ಜೊತೆಯಲ್ಲಿ ನಿಗದಿತ ಇ.ಎಂ.ಡಿ. ಮೊತ್ತವನ್ನು ಡಿ.ಡಿ. ರೂಪದಲ್ಲಿ ಲಗತ್ತಿಸಬೇಕು. ಇಲ್ಲವಾದಲ್ಲಿ ಅಂತಹ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

12) ದರಗಳನ್ನು ಇಲಾಖಾ ಎಸ್.ಎಸ್.ಆರ್./ ಕಾಸ್ಟ್‌ನಾರ್ಮ್ಸ್ ದರಗಳಿಗಿಂತ ಶೇಕಡವಾರು ಇಂತಿಷ್ಟು ಹೆಚ್ಚು ಅಥವಾ ಶೇಕಡವಾರು ಇಂತಿಷ್ಟು ಕಡಿಮೆ ಎಂದು ಸ್ಪಷ್ಟವಾಗಿ ನಮೂದಿಸತಕ್ಕದ್ದು.

13) ಕಾಮಗಾರಿಗಳನ್ನು ಸಮರ್ಪಕವಾಗಿ ಪೂರ್ಣಗೊಳಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿಗಳು, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಅಥವಾ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರಿಂದ ತಪಾಸಣೆಯನ್ನು ಕಡ್ಡಾಯವಾಗಿ ಮಾಡಿಸತಕ್ಕದ್ದು.

14) ಆಯಾಯ ಯೋಜನೆಯಡಿಯಲ್ಲಿನ ಕಾಮಗಾರಿಗಳನ್ನು ನಿಗದಿತ ಅವಧಿಯೊಳಗೆ ಅಂದರೆ, ದಿನಾಂಕ: 31–01–2010 ರೊಳಗೆ ಪೂರ್ಣಗೊಳಿಸತಕ್ಕದ್ದು ಮತ್ತು ಹಣ ಪಾವತಿಗೆ ಆಯಾಯ ಶೀರ್ಷಿಕೆಯಡಿ ಹಣ ಬಿಡುಗಡೆಯಾದ ನಂತರವೇ ಪಾವತಿಸಲು ಕ್ರಮ ಕೈಗೊಳ್ಳಲಾಗುವುದು.

15) ಮೇಲಿನ ಎಲ್ಲಾ ಕಾಮಗಾರಿಗಳು ಋತುಕಾಲೀನ ಕಾಮಗಾರಿಗಳಾಗಿದ್ದು ಕಾಲ ಕಾಲಕ್ಕನುಗುಣವಾಗಿ ಮಾಡಬೇಕಾದ ಕಾಮಗಾರಿಗಳನ್ನು ಆಯಾಯ ಕಾಲಮಿತಿಯಲ್ಲೆ ನಿರ್ವಹಿಸತಕ್ಕದ್ದು. ಈ ಬಗ್ಗೆ ಮಾಹಿತಿಯನ್ನು ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿಗಳಿಂದ ಪಡೆಯತಕ್ಕದ್ದು.

16) ನಿಗದಿತ ಸಮಯದೊಳಗಾಗಿ ಕಾಮಗಾರಿಗಳನ್ನು ಪೂರ್ಣಗೊಳಿಸದೇ ಇದ್ದಲ್ಲಿ ಭದ್ರತಾ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಕಾಮಗಾರಿಗಳನ್ನು ಮರು ಟೆಂಡರ್ ಮೂಲಕ ಅಥವಾ ಗುತ್ತಿಗೆ ಆಧಾರದ ಮೇಲೆ ಮಾಡಿಸಲಾಗುವುದು. ಒಂದೊಮ್ಮೆ ವೆಚ್ಚವು ಮಂಜೂರಾದ ಮೊತ್ತಕ್ಕಿಂತ ಹೆಚ್ಚಿಗೆ ಆದಲ್ಲಿ ಮೂಲ ಟೆಂಡರ್ ದಾರರಿಂದ ವಸೂಲಿ ಮಾಡಲಾಗುವುದು. ಉಳಿಕೆ ಅದಲ್ಲಿ ಟೆಂಡರ್‌ದಾರರು ಉಳಿಕೆ ಹಣಕ್ಕೆ ಬಾದ್ಯಸ್ಥರಾಗಿರುವುದಿಲ್ಲ ಮತ್ತು ಅಂತಹ ತಪ್ಪಿತಸ್ಥ ಗುತ್ತಿಗೆದಾರರ ಹೆಸರನ್ನು ಕಪ್ಪು ಪಟ್ಟಿಯಲ್ಲಿ ಸೇರಿಸಲಾಗುವುದು.

17) ಕಾಮಗಾರಿ ನಿರ್ವಹಿಸುವ ಸಮಯದಲ್ಲಿ ಯಾವುದೇ ಗಿಡ ಮರಗಳಿಗೆ ಹಾನಿಯುಂಟಾಗದಂತೆ ಎಚ್ಚರಿಕೆ ವಹಿಸತಕ್ಕದ್ದು. ಒಂದೊಮ್ಮೆ ಹಾನಿ ಉಂಟಾದಲ್ಲಿ ಮರಗಿಡಗಳ ಮೌಲ್ಯ ಮತ್ತು ದಂಡವನ್ನು ಸಂಬಂಧಿಸಿದ ಗುತ್ತಿಗೆದಾರರಿಂದ ವಸೂಲಿ ಮಾಡಲಾಗುವುದು.

18) ಟೆಂಡರ್ ಒಪ್ಪಿಗೆಯಾದ ಬಗ್ಗೆ ಯಶಸ್ವಿ ಗುತ್ತಿಗೆದಾರರಿಗೆ ಅಂಚೆ ಮೂಲಕ ತಿಳಿಸಲಾಗುವುದು.

19) ಯಶಸ್ವಿ ಟೆಂಡರ್‌ದಾರರು ಕಾಮಗಾರಿ ಪ್ರಾರಂಭಿಸುವ ಮುನ್ನ ಈ ಕಛೇರಿಯಲ್ಲಿ ಭದ್ರತಾ ಠೇವಣಿಯನ್ನು ಜಮಾ ಮಾಡಿ ಟೆಂಡರ್ ಕರಾರು ಒಪ್ಪಂದ ಮಾಡಿಕೊಂಡು ಕಾರ್ಯಾದೇಶ ಪಡೆದು ಕಾಮಗಾರಿ ಪ್ರಾರಂಭಿಸತಕ್ಕದ್ದು.

20) ಕಾಮಗಾರಿಯನ್ನು ನಿರ್ವಹಿಸಲು ಯಾವುದೇ ಸಂದರ್ಭದಲ್ಲಿ ಮತ್ತು ಯಾವುದೇ ಕಾರಣಕ್ಕೂ ಮುಂಗಡ ಹಣವನ್ನು ನೀಡಲಾಗುವುದಿಲ್ಲ. ಕಾಮಗಾರಿಯನ್ನು ಪೂರ್ಣಗೊಳಿಸಿದ ನಂತರವೂ ಮೇಲಾಧಿಕಾರಿಗಳಿಂದ ಯಾವುದೇ ಕಾರಣದಿಂದ ಹಣ ಬಿಡುಗಡೆಯಾಗದಿದ್ದ ಪಕ್ಷದಲ್ಲಿ ಹಣ ಬಿಡುಗಡೆಯಾಗುವವರೆಗೆ ಕಾಯತಕ್ಕದ್ದು.

21) ರಿಪ್ಪಿಂಗ್ ಕಾಮಗಾರಿಯನ್ನು ಹೊರತುಪಡಿಸಿ ಗುಂಡಿ ತೆಗೆಯುವುದು. ಭೂ ಮತ್ತು ಜಲಸಂರಕ್ಷಣಾ ಕಾಮಗಾರಿ, ಜಾನುವಾರು ನಿರೋಧಕ ಕಂದಕ ತೆಗೆಯುವ ಕಾಮಗಾರಿಗಳನ್ನು ಸ್ಥಳೀಯ ಕೂಲಿಗಾರರಿಂದಲೇ ನಿರ್ವಹಿಸತಕ್ಕದ್ದು ಯಾವುದೇ ಸಂದರ್ಭದಲ್ಲಿ ಯಾವುದೇ ಕಾರಣಕ್ಕೂ ಯಂತ್ರಗಳನ್ನು ಬಳಸುವಂತಿಲ್ಲ.

22) ರಿಪ್ಪಿಂಗ್, ಬುಲ್ಡೋಜರ್ ಡಿ–80 ಯಂತ್ರದಿಂದ ಮಾಡಬೇಕು ಹಾಗೂ ಮಾಡಬೇಕಾದ ಆಳ ಕನಿಷ್ಠ 75 ಸೆ.ಮೀ ಮತ್ತು ಅಗಲ ಕನಿಷ್ಠ 45 ಸೆ.ಮೀ.ಗಿಂತ ಕಡಿಮೆ ಇರಕೂಡದು. ರಿಪ್ಪಿಂಗ್ ಕಾಮಗಾರಿ ಆಂತರಿಕ ಪರಿವೀಕ್ಷಣಾ ರಸ್ತೆ ನಿರ್ಮಾಣ ಒಳಗೊಂಡಿರುತ್ತದೆ.

23) ಯಾವುದೇ ಕಾರಣದಿಂದ ಮೇಲ್ಕಂಡ ದಿನಾಂಕದಂದು ಟೆಂಡರ್ ಜರುಗದಿದ್ದಲ್ಲಿ ಮರು ಟೆಂಡರ್‌ನ್ನು ಮೇಲಿನ ಷರತ್ತುಗಳಿಗೊಳಪಟ್ಟಂತೆ ದಿನಾಂಕ: 26–10–2009ರಂದು ನಡೆಸಲಾಗುವುದು. ಹಾಗೂ ಸದರಿ ದಿನಾಂಕದಂದು ಟೆಂಡರ್ ಜರುಗದಿದ್ದಲ್ಲಿ ಮರು ಟೆಂಡರನ್ನು ದಿನಾಂಕ: 06–11–2009ರಂದು (ಮೇಲಿನ ಷರತ್ತುಗಳಿಗೊಳಪಟ್ಟಂತೆ) ಟೆಂಡರ್ ನಡೆಸಲಾಗುವುದು.

24) ಬುಲ್ಡೋಜರ್ ಸಾಗಾಣಿಕೆಗಾಗಿ ಪ್ರತ್ಯೇಕ ವೆಚ್ಚವನ್ನು ನೀಡಲಾಗುವುದಿಲ್ಲ.

25) ಭದ್ರತಾ ಠೇವಣಿಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ (Deputy Conservator of Forests, Davanagere Division) ಇವರ ಪದನಾಮಕ್ಕೆ ತೆಗೆಯಿಸಿ ದಾವಣಗೆರೆಯಲ್ಲಿ ಪಾವತಿಯಾಗುವಂತೆ ಇರತಕ್ಕದ್ದು.

26) ಷೆಡ್ಯೂಲ್‌ನಲ್ಲಿ ತಿಳಿಸಿರುವ ಪ್ರಮಾಣಗಳು ಅಂದಾಜು ಪ್ರಮಾಣಗಳಾಗಿದ್ದು ಹೆಚ್ಚು ಅಥವಾ ಕಡಿಮೆಯಾಗುವ ಸಾಧ್ಯತೆಗಳಿದ್ದು ಇದಕ್ಕೆ ಬದ್ಧರಾಗಿರತಕ್ಕದ್ದು.

27) ಕಾಮಗಾರಿಗಳನ್ನು ತೃಪ್ತಿಕರವಾಗಿ ನಿಗದಿತ ಸಮಯದೊಳಗಾಗಿ ಪೂರ್ಣಗೊಳಿಸಿದ ಬಗ್ಗೆ ಸಂಬಂಧಿಸಿದ ವಲಯ ಅರಣ್ಯಾಧಿಕಾರಿಗಳಿಂದ ಪ್ರಮಾಣ ಪತ್ರವನ್ನು ಹಾಜರು ಪಡಿಸಿದ ನಂತರವೇ ಭದ್ರತಾ ಠೇವಣಿಯನ್ನು ಹಿಂತಿರುಗಿಸಲು ಕ್ರಮ ಕೈಗೊಳ್ಳಲಾಗುವುದು.

28) ಯಾವುದೇ ಸಂದರ್ಭದಲ್ಲಿ ಟೆಂಡರ್‌ನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಥವಾ ಟೆಂಡರ್‌ನ್ನು ರದ್ದುಗೊಳಿಸುವ ಇಲ್ಲವೇ ಮುಂದೂಡುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿರವರು ಹೊಂದಿರುತ್ತಾರೆ.

29) ಪ್ರತಿ ಯೂನಿಟಿಗೆ ಟೆಂಡರ್ ನಮೂನೆಗಳನ್ನು ಪ್ರತ್ಯೇಕವಾಗಿ ಸಲ್ಲಿಸುವುದು.

30) ಕಾಮಗಾರಿ ನಿರ್ವಹಿಸುವಲ್ಲಿ ಏನಾದರೂ ಸಮಸ್ಯೆ ಉದ್ಭವಿಸಿದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಬಳ್ಳಾರಿ ವೃತ್ತ, ಬಳ್ಳಾರಿ ರವರ ತೀರ್ಮಾನವೇ ಅಂತಿಮವಾಗಿದ್ದು, ಇದಕ್ಕೆ ಬದ್ಧರಾಗಿರತಕ್ಕದ್ದು.

31) ಯಂತ್ರಗಳನ್ನು ಹೊಂದಿರುವ ಬಗ್ಗೆ ವಿವರಗಳು ಮತ್ತು ನಿಬಂಧನೆಗಳಿಗೆ ಸಂಬಂಧಿಸಿದಂತೆ ನೀಡಿರುವ ವಿವರಗಳು ಸತ್ಯವಿರುವ ಬಗ್ಗೆ ಸ್ವಯಂ ದೃಢೀಕೃತ ಪತ್ರ ಲಗತ್ತಿಸುವುದು. ಸುಳ್ಳು ದಾಖಲಾತಿಗಳನ್ನು ಲಗತ್ತಿಸುವುದು ಕಂಡುಬಂದಲ್ಲಿ ಕಪ್ಪು ಪಟ್ಟಿಗೆ ಸೇರಿಸಲಾಗುವುದು.

32) ಕಾಮಗಾರಿಗಳನ್ನು ಕಾರ್ಮಿಕ ಇಲಾಖೆ ನಿಬಂಧನೆಗಳಿಗೆ ಒಳಪಟ್ಟಂತೆ ನಿರ್ವಹಿಸುವುದು ಮತ್ತು ಕಾರ್ಮಿಕರಿಗೆ ಸಂಬಂಧಿಸಿದಂತೆ ಉದ್ಭವಿಸುವ ಘಟನೆಗಳಿಗೆ ಗುತ್ತಿಗೆದಾರರೇ ಸಂಪೂರ್ಣ ಹೊಣೆಗಾರರಾಗಿರುತ್ತಾರೆ. ಅರಣ್ಯ ಇಲಾಖೆಯ ಯಾವುದೇ ಹೊಣೆಗಾರಿಕೆ ಇರುವುದಿಲ್ಲ.

33) ಹೆಚ್ಚಿನ ವಿವರಗಳಿಗಾಗಿ ಈ ಕಾರ್ಯಾಲಯದಲ್ಲಿ ಕೆಲಸದ ದಿವಸಗಳಂದು ಕಛೇರಿಯ ವೇಳೆಯಲ್ಲಿ ಪಡೆಯಬಹುದಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ದಾವಣಗೆರೆ ವಿಭಾಗ, ದಾವಣಗೆರೆ.

ಪಿ.ಆರ್. 822

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ), ಸಣ್ಣ ನೀರಾವರಿ ವಿಭಾಗ ಬಿಜಾಪೂರ**

**ಅಲ್ಪಾವಧಿ ಟೆಂಡರ್ ಆಹ್ವಾನ ಪ್ರಕಟಣೆ (ಐ.ಎಫ್.ಟಿ. ಕೆಬ್ಲು–4**

**ಐಎಫ್‌ಟಿ ನಂ:ಇಇ/ಎಂಐಡಿ/ಬಿಜೆಪಿ/ಟಿಎನ್‌ಡಿ/ಸಇಂ–1/09–10, ದಿನಾಂಕ: 14ನೇ ಸೆಪ್ಟೆಂಬರ್ 2009**

1. ಕಾರ್ಯಪಾಲಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬಿಜಾಪೂರ ಕಾರ್ಯಾಲಯದಿಂದ ಅರ್ಹ ಗುತ್ತಿಗೆದಾರರಿಂದ ಈ ಕೆಳಗೆ ಕಾಣಿಸಿದ ಕಾಮಗಾರಿಯ ಟೆಂಡರ್ ಆಹ್ವಾನಿಸಲಾಗಿದೆ. ಗುತ್ತಿಗೆದಾರರು ಕಾಮಗಾರಿಗೆ ಟೆಂಡರ್ ಸಲ್ಲಿಸಬಹುದಾಗಿದ್ದು, ಕೆ.ಟಿ.ಪಿ.ಪಿ. ಆಕ್ಟ್ ನಿಯಮ–28 ರ ಅನುಸಾರ ದ್ವಿಲಕೋಟೆ ಪದ್ಧತಿಯನ್ನು ಅನುಸರಿಸಲಾಗುವುದು. ಗುತ್ತಿಗೆದಾರರು ಟೆಂಡರನ್ನು ಎರಡು ಪ್ರತ್ಯೇಕ ಲಕೋಟೆಯಲ್ಲಿ ಮೊಹರು ಮಾಡಿ ಸಲ್ಲಿಸಬೇಕಾಗಿದ್ದು, ಮೊದಲನೇ ಲಕೋಟೆಯಲ್ಲಿ ಮುಂಗಡ ಠೇವಣಿ ಮೊತ್ತ ಮತ್ತು ಕಾಮಗಾರಿ ಕೈಗೊಳ್ಳಲು ಸಾಮರ್ಥ್ಯ ಬಗ್ಗೆ ವಿವರ (ಐ.ಟಿ.ಟಿ.ಕ್ಲಾಜ್–3 ಮತ್ತು 6 ರ ಅನುಸಾರ) ಗಳನ್ನು ಸಲ್ಲಿಸಬೇಕಾಗಿದ್ದು, ಈ ಲಕೋಟೆಯನ್ನು ಮೊದಲು ತೆರೆಯಲಾಗುವುದು. ಎರಡನೇ ಲಕೋಟೆಯಲ್ಲಿ ಟೆಂಡರ್ ದರ ವಿವರವನ್ನು ಸಲ್ಲಿಸಬೇಕಾಗಿದ್ದು, ಈ ಲಕೋಟೆಯನ್ನು ಗುತ್ತಿಗೆದಾರರು ಕಾಮಗಾರಿ ಕೈಕೊಳ್ಳಲು ಶಕ್ಯತೆಯ ಅರ್ಹತೆ ಹೊಂದಿದಲ್ಲಿ

ಮಾತ್ರ ತೆರೆಯಲಾಗುವುದು. ಗುತ್ತಿಗೆದಾರರು, ಕಾಮಗಾರಿಯ ಗುತ್ತಿಗೆ ಅರ್ಹತೆ ಹೊಂದಲು ಕ್ಲಾಜ್–3 ರಲ್ಲಿ ನಿರ್ದೇಶಿಸಿರುವ ಕನಿಷ್ಠ ಅರ್ಹತೆಯ ಬಗ್ಗೆ ಸಂಪೂರ್ಣ ಮಾಹಿತಿ ಮಾಡಿಕೊಳ್ಳಲು ಉಪದೇಶಿಸಲಾಗಿದೆ.

2. ಗುತ್ತಿಗೆದಾರರು ಈ ಕೆಳಗಿನ ಟೇಬಲ್‌ನಲ್ಲಿ ತಿಳಿಸಿರುವ ಟೆಂಡರ್ ಫಾರ್ಮಿನ ಬೆಲೆಯನ್ನು (ಮರಳಿ ಹಿಂತಿರುಗಿಸಲಾಗದ) ನಗದು ರೂಪದಲ್ಲಿ ಇಲ್ಲವೆ ಬಿಜಾಪೂರದಲ್ಲಿ ಪಾವತಿಯಾಗುವಂತೆ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ವಿಜಾಪೂರ ಇವರ ಹೆಸರಿನಲ್ಲಿ ಡಿಮ್ಯಾಂಡ್ ಡ್ರಾಫ್ಟ್/ರಾಷ್ಟ್ರೀಕೃತ/ಶೆಡ್ಯೂಲ್ಡ್ ಬ್ಯಾಂಕಿನ ಪೇ ಆರ್ಡರನ್ನು ಸಂದಾಯ ಮಾಡಿ ದಿನಾಂಕ: 26.10.2009 ರಿಂದ 28.10.2009 ರವರೆಗೆ ಟೆಂಡರ್ ಡಾಕ್ಯುಮೆಂಟ್ಸ್ ಖರೀದಿಸಬಹುದು. ಆಸಕ್ತ ಗುತ್ತಿಗೆದಾರರು ಹೆಚ್ಚುವರಿ ಮಾಹಿತಿಯನ್ನು ಕಚೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು. ಗುತ್ತಿಗೆದಾರರ ಕೋರಿಕೆಯ ಮೇರೆಗೆ ಅಂಚೆ ವೆಚ್ಚ ರೂ.200–00 (ಪ್ರತಿ ಕೆಲಸಕ್ಕೆ) ಗಳನ್ನು ಗುತ್ತಿಗೆದಾರರಿಂದ ಭರಣಾ ಮಾಡಿಕೊಂಡು ಟೆಂಡರ್ ಡಾಕ್ಯುಮೆಂಟ್ಸ್‌ಗಳನ್ನು ನೊಂದಾಯಿತ ಅಂಚೆ ಸ್ಪೀಡ್ ಪೋಸ್ಟ್ ಮೂಲಕ ಕಳುಹಿಸಲಾಗುವುದು. ಸದರಿ ಟೆಂಡರ್ ಡಾಕ್ಯುಮೆಂಟ್ಸ್ ಅಂಚೆಯಲ್ಲಿ ವಿಳಂಬದಿಂದ ಸರಿಯಾದ ಸಮಯದಲ್ಲಿ ಗುತ್ತಿಗೆದಾರರಿಗೆ ತಲುಪದೆ ಇದ್ದಲ್ಲಿ ಇದಕ್ಕೆ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ವಿಜಾಪೂರ ಇವರು ಹೊಣೆಗಾರರಾಗುವುದಿಲ್ಲ ಇದಕ್ಕೆ ಗುತ್ತಿಗೆದಾರರೆ ಹೊಣೆಗಾರರಾಗಿರುತ್ತಾರೆ.

3. ಟೆಂಡರ್ ದಾಸ್ತಾವೇಜುಗಳ ಜೊತೆಗೆ ಮುಂಗಡ ಠೇವಣಿ ಹಣವನ್ನು ಕೆಳಗಿನ ಟೇಬಲ್‌ನಲ್ಲಿ ತಿಳಿಸಿದ ಮೊತ್ತಕ್ಕೆ ಹಾಗೂ ನಿಗದಿತ ಯಾವುದೇ ರೂಪದಲ್ಲಿ ಗುತ್ತಿಗೆ ಸಲ್ಲಿಸಿದ ದಿನಾಂಕದಿಂದ ಚಲಾವಣೆಯಲ್ಲಿರುವ ಗುತ್ತಿಗೆ ಅವಧಿಗಿಂತ 45 ದಿನಗಳವರೆಗೆ ಹೆಚ್ಚಿನ ಚಲಾವಣೆಯಲ್ಲಿರುವಂತೆ ಟೆಂಡರ್‌ದೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

4. ಟೆಂಡರ್‌ಗಳನ್ನು ಮುಖ್ಯ ಇಂಜಿನೀಯರರ ಕಚೇರಿ ಸಣ್ಣ ನೀರಾವರಿ (ಉ) ವಲಯ, ವಿಜಾಪೂರ ಇಲ್ಲವೆ ಅಧೀಕ್ಷಕ ಇಂಜಿನೀಯರರು, ಸಣ್ಣ ನೀರಾವರಿ ವೃತ್ತ ಕಚೇರಿ ಬೆಳಗಾಂವ ಇಲ್ಲವೆ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ವಿಜಾಪೂರ ಇವರ ಕಚೇರಿಯಲ್ಲಿ ದಿನಾಂಕ: 19.11.2009 ರಂದು ಸಾಯಂಕಾಲ 4.00 ಗಂಟೆಯ ಒಳಗಾಗಿ ಸಲ್ಲಿಸತಕ್ಕದ್ದು. ಒಂದನೇ ಲಕೋಟೆಯನ್ನು ಮುಂದಿನ ಕೆಲಸದ ದಿನದಂದು ಮುಂಜಾನೆ 11–00 ಗಂಟೆಗೆ ಉಪಸ್ಥಿತರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ತೆರೆದು ಓದಲಾಗುವುದು. ಟೆಂಡರ್‌ಗಳನ್ನು ಸ್ವೀಕರಿಸುವ ದಿವಸವು ಸಾರ್ವತ್ರಿಕ ರಜಾ ದಿವಸ ಎಂದು ಘೋಷಿಸಿದಲ್ಲಿ ಮುಂದಿನ ಕೆಲಸದ ದಿವಸವೆಂದು ಪರಿಗಣಿಸಲಾಗುವುದು.

5. ದಿನಾಂಕ: 04.11.2009 ರಂದು ಮುಂಜಾನೆ 11.00 ಗಂಟೆಗೆ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ವಿಜಾಪೂರ ಕಚೇರಿಯಲ್ಲಿ ಟೆಂಡರ್ ಕ್ಲಾಜ್–8.2 ರ ಅನುಸಾರ ಗುತ್ತಿಗೆದಾರರ ಯಾವುದೇ ಮಾಹಿತಿಗಳಿಗೆ ಸ್ಪಷ್ಟೀಕರಿಸಲು ಟೆಂಡರ್ ಪೂರ್ವ ಸಭೆಯನ್ನು ಜರುಗಿಸಲಾಗುವುದು.

6. ಇನ್ನುಳಿದ ಮಾಹಿತಿಗಳನ್ನು ಟೆಂಡರ್ ಡಾಕ್ಯುಮೆಂಟ್ಸ್‌ದಿಂದ ಪಡೆಯಬಹುದು.

**ಟೇಬಲ್**

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಮುಂಗಡ ಠೇವಣಿ ಹೆಚ್ಚು/ಕಡಿಮೆ (ರೂ.ಗಳಲ್ಲಿ) | ಟೆಂಡರ್ ಡಾಕ್ಯುಮೆಂಟ್ಸ್ ಬೆಲೆ (ರೂ) | ಕಾಮಗಾರಿ ಪೂರ್ಣಗೊಳಿಸಲು ನಿಗದಿಪಡಿಸಿದ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|
| 1 | ವಿಜಾಪೂರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕಿನಲ್ಲಿ ಕೋಲಾರ ಹತ್ತಿರ ಸೇತುವೆ ಸಹಿತ ಬ್ಯಾರೇಜ್ | 325.80 | 4,89,000/– | 15000–00 +1875–00 ತೆರಿಗೆ | 11 ತಿಂಗಳು |
| 2 | ವಿಜಾಪೂರ ಜಿಲ್ಲೆ ಹಾಗೂ ತಾಲ್ಲೂಕಿನ ಸಾರವಾಡ ಗ್ರಾಮದ ಹತ್ತಿರ ಡೋಣಿ ನದಿಯ ಪ್ರವಾಹ ರಕ್ಷಣಾ ಕಾಮಗಾರಿ | 144.00 | 2,16,000/– | 12000–00 +1500–00 ತೆರಿಗೆ | 11 ತಿಂಗಳು |
| 3 | ವಿಜಾಪೂರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕಿನಲ್ಲಿ ಡೊಂಕಮಡು ಹತ್ತಿರ ನಾಲಾಕ್ಕೆ ಬ್ಯಾರೇಜ್ ಕಾಮಗಾರಿ | 256.00 | 3,80,000/– | 15000–00 +1875–00 ತೆರಿಗೆ | 11 ತಿಂಗಳು |

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಮುಂಗಡ ಠೇವಣಿ ಹೆಚ್ಚು/ಕಡಿಮೆ (ರೂ.ಗಳಲ್ಲಿ) | ಟೆಂಡರ್ ಡಾಕ್ಯುಮೆಂಟ್ಸ್ ಬೆಲೆ (ರೂ) | ಕಾಮಗಾರಿ ಪೂರ್ಣಗೊಳಿಸಲು ನಿಗದಿಪಡಿಸಿದ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|
| 4 | ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲ್ಲೂಕಿನಲ್ಲಿ ಮಲಪ್ರಭಾ ನದಿಗೆ ಚಿಕ್ಕಮಾಗಿ–ಹಿರೇಮಾಗಿ ಹತ್ತಿರ ಬಿಸಿಬಿ ನಿರ್ಮಾಣ | 471.00 | 7,10,000/– | 15000–00 +1875–00 ತೆರಿಗೆ | 18 ತಿಂಗಳು |

ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ವಿಜಾಪೂರ.

**SECTION 1: INVITATION FOR SHORT TERM TENDERS**

**(IFT-KW-4)**

**IFT No.:EE/MID/BJP/AE-3/2009-10, Dated: 14th September 2009**

1. The Executive Engineer MI Division Bijapur invites tenders from eligible tenderers, for the construction of works detailed in the Table below. The tenderers may submit tenders for any or all of the works given in the Table. Two Cover Tender procedure as per Rule 28 of the KTPP Act shall be followed. The Tenderers are required to submit two separate sealed covers, one containing the Earnest money deposit and the details of their capability to undertake the tender (as detailed in ITT Clause 3 and 6), which will be opened first and the second cover containing the price tender which will be opened only if the Tenderer is found to be qualified to execute the tendered works. The Tenderers are advised to note the minimum qualification criteria specified in Clause 3 of the Instrucions to Tenderers to qualify for award of the contract.
2. Tender documents may be purchased from the office of the Executive Engineer MI Division Bijapur from 26.10.2009 to 28.10.2009 for a non-refundable fee (for two sets) as indicated in the Table below, in the form of cash or Demand Draft/Pay Order on any Nationalised/ Scheduled bank payable at Bijapur in favour of Executive Engineer MI Division Bijapur. Interested tenderers may obtain further information at the same address. Tender documents requested by mail will be dispatched by registered/speed post on payment of an extra amount of Rs.200/-. The Executive Engineer MI Division Bijapur will not be held responsible for the postal delay if any, in the delivery of the documents or non-receipt of the same.
3. Tenders must be accompanied by earnest money deposit specified for the work in the Table below. Earnest money deposit will have to be in any one of the forms as specified in the Tender document and shall have to be valid for 45 days beyond the validity of the tender.
4. Tenders must be delivered to (1) The Chief Engineer, M.I.(N)Zone, Bijapur or (2) The Superintending Engineer MI Circle Belgaum or (3) Executive Engineer MI Division Bijapur on or before 16-00 hours on 19-11-2009, and First Cover Tenders will be opened on the next working day at 11-00 hours, in the presence of the Tenderers who wish to attend. If the office happens to be closed on the date of receipt of the tenders as specified, the tenders will be received and opened on the next working day at the same time and venue.
5. A Pre-tender meeting will be held on 14.11.2009 at 11.00 hours at the office of Executive Engineer MI Division Bijapur to clarify the issues if any, and to answer questions on any matter that may be raised at that stage as stated in Clause 8.2 of 'Instructions to Tenderers' of the tender document.
6. Other details can be seen in the tender documents.

**TABLE**

| Sl. No. | Name of work | Approximae value of work (Rs. in Lakhs) | Earnest Money Deposit (Rs). | Cost of document (Rs.) | completion (Including monsoon) |
|---|---|---|---|---|---|
| 1 | Construction of B.C.B near Kolhar in B-Bagewadi Tq of Bijapur Dist. | 325.80 | 4,89,000/- | 15000-00 +1875-00 Tax | 11 Months |
| 2 | Flood Protection Work near Sarwad village from Doni River in Tq & Distt:Bijapur | 144.00 | 2,16,000 | 12000-00 +1500-00 Tax | 11 Months |
| 3 | Construction of Barrage across nala near Donkamadu in Muddebihal Tq. Dist:Bijapur | 256.00 | 3,80,000/- | 15000-00 +1875-00 Tax | 11 Months |
| 4 | Construction of BCB across Malaprabha near Chikkmagi-Hiremagi in Hungund Tq. Dist:Bagalkot | 471.00 | 7,10,000/- | 15000-00 +1875-00 Tax | 18 Months |

Executive Enginner, M.I. Division, Bijapur.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಸಣ್ಣ ನೀರಾವರಿ ವಿಭಾಗ, ಮಂಗಳೂರು**

**ಕಾರ್ಯನಿರ್ವಾಹಕ ಇಂಜಿನಿಯರ್‌ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಮಂಗಳೂರು–1**

**ಟೆಂಡರ್ ಪ್ರಕಟಣೆ (ದ್ವಿಲಕೋಟೆ ಪದ್ಧತಿ)**

**ನಂ: ಸನೀವಿ/ಮಂ/ಇ/ಟೆಂಡರ್–30/2009–10/2080, ದಿನಾಂಕ: 14ನೇ ಸೆಪ್ಟೆಂಬರ್ 2009**

ಈ ಕೆಳಗೆ ಸೂಚಿಸಿದ ಕೊಡಗು ಜಿಲ್ಲೆಯ ಕಾಮಗಾರಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಅರ್ಹ ಒಂದನೇ ದರ್ಜೆಯ ಗುತ್ತಿಗೆದಾರರಿಂದ ಕರ್ನಾಟಕ ರಾಜ್ಯಪಾಲರ ಪರವಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳ ಪಾರದರ್ಶಕತೆ ಅಧಿನಿಯಮಗಳನ್ವಯ ಸ್ಟಾಂಡರ್ಡ್ ಟೆಂಡರ್ ಡಾಕ್ಯೂಮೆಂಟ್ ಕೆಡಬ್ಲ್ಯು–4 ಕಲಂ ಅನ್ವಯ ಷರತ್ತುಗಳು ಹಾಗೂ ನಿಬಂಧನೆಗಳಲ್ಲಿ ಒಳಪಟ್ಟಂತೆ ಐಟಂವಾರು ಮೊಹರಾದ ಟೆಂಡರುಗಳನ್ನು **"ದ್ವಿಲಕೋಟೆ ಪದ್ಧತಿಯಲ್ಲಿ"** ಆಹ್ವಾನಿಸಲಾಗಿದೆ. ಟೆಂಡರಿನ ದ್ವಿಲಕೋಟೆ ಬಿಡ್ ಪದ್ಧತಿ, ತಾಂತ್ರಿಕ ಬಿಡ್ ಹಾಗೂ ವಿತ್ತೀಯ (ಫೈನಾನ್ಸಿಯಲ್) ಬಿಡ್ಡನ್ನು ಒಳಗೊಂಡಿದೆ. ಪೂರ್ತಿಗೊಳಿಸಿದ ಟೆಂಡರ್ ಶೆಡ್ಯೂಲನ್ನು (Standard Documentನಲ್ಲಿನ) ದಿ: 30.10.2009 ರಂದು ಸಂಜೆ 4.00 ಗಂಟೆಯವರೆಗೆ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಮಂಗಳೂರು ಇವರ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಖಾಲಿ ಟೆಂಡರ್ ಶೆಡ್ಯೂಲ್‌ಗಳನ್ನು ದಿ: 29.10.2009ರವರೆಗೆ ನೀಡಲಾಗುವುದು. **"ತಾಂತ್ರಿಕ ಬಿಡ್"**ನ್ನು ಸಾಧ್ಯವಾದರೇ ಅಂದೇ ತೆರೆಯಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊಬಲಗು (ರೂ.ಗಳಲ್ಲಿ) | ಇ.ಎಂ.ಡಿ. (ರೂ.ಗಳಲ್ಲಿ) | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಕಾಲಮಿತಿ | ಟೆಂಡರ್ ಶೆಡ್ಯೂಲ್ ಬೆಲೆ (ತೆರಿಗೆ ಸೇರಿ) |
|---|---|---|---|---|---|
| 1. | ಸೋಮವಾರಪೇಟೆ ತಾಲ್ಲೂಕಿನ ಆಲೂರು ಬಂಡಿಯಮ್ಮನ ಕೆರೆ ಮತ್ತು ಕಾಲುವೆ ಅಭಿವೃದ್ಧಿ, ಚಾಮಿ ಕೆರೆ ಮತ್ತು ಕಾಲುವೆ ಅಭಿವೃದ್ಧಿ, ಆಲೂರು ಕೆರೆ ಮತ್ತು ಕಾಲುವೆ ಅಭಿವೃದ್ಧಿ ಮತ್ತು ಆಲೂರು ಬಂಡಿಯಮ್ಮನ ಕೆರೆ ರಸ್ತೆಗೆ ತಡೆಗೋಡೆ ನಿರ್ಮಾಣ ಕಾಮಗಾರಿ | 1,88,16,981.53 | 2,82,300.00 | 12 ತಿಂಗಳು ಮಳೆಗಾಲ ಸೇರಿ | 20,000 + ತೆರಿಗೆ |

**ತಾಂತ್ರಿಕ ಬಿಡ್–ಭಾಗ–1:**

ಗುತ್ತಿಗೆದಾರರು ತಮ್ಮ ತಾಂತ್ರಿಕ ಬಿಡ್ ಸಾಮರ್ಥ್ಯಕ್ಕೆ ಅನುಗುಣವಾಗಿ ಈ ಕೆಳಕಾಣಿಸಿರುವ ನಿಬಂಧನೆಗಳಿಗೆ ಅರ್ಹತೆ ಹೊಂದಿರುವವರು ಮಾತ್ರ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

1. 2009–10ನೇ ಆರ್ಥಿಕ ಸಾಲಿನ ಹಿಂದಿನ 5 ವರ್ಷಗಳ ಆರ್ಥಿಕ ವಹಿವಾಟಿನ ವಿವರ (2004–05 ರಿಂದ 2008–09ರವರೆಗೆ)
   ಅ. 2004–05ರಿಂದೀಚೆಗೆ ಕನಿಷ್ಠ 2 ಆರ್ಥಿಕ ವರ್ಷದಲ್ಲಿ ಟೆಂಡರಿಗೆ ಇಡಲಾದ ಮೊತ್ತದ ಎರಡರಷ್ಟು ಆರ್ಥಿಕ ವಹಿವಾಟನ್ನು ಮಾಡಿರತಕ್ಕದ್ದು. (ಸಿವಿಲ್ ನಿರ್ಮಾಣ ಕಾಮಗಾರಿಗೆ ಸಂಬಂಧಿಸಿದಂತೆ)
   ಆ. ಕಳೆದ 5 ವರ್ಷಗಳಲ್ಲಿ ವರ್ಷ 2008–09ನೇ ಸಾಲಿನ ಆರ್ಥಿಕ ವಹಿವಾಟಿಗೆ ಹೋಲಿಸಿದಾಗ ಶೇ. 10ರ ಹೆಚ್ಚಿನ ರಿಯಾಯಿತಿಯನ್ನು ಪರಿಗಣಿಸಲಾಗುವುದು.
   i. ಈ ಯೋಜನೆಗೆ 5 ವರ್ಷಗಳ ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಯ ಇಂತಹುದೇ ಅನುಭವವುಳ್ಳ ಒಬ್ಬ ಪ್ರೊಜೆಕ್ಟ್ ಮೆನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ಪರಿಣಿತರನ್ನು ಹೊಂದಿರಬೇಕು.
   ii. ಟೆಂಡರಿನಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು ಶೇ. 80ರಷ್ಟು ಮೊತ್ತದ ಇದೇ ತರಹದ ಒಂದು ಕಾಮಗಾರಿಯನ್ನು ಕಳೆದ ಐದು ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತ ಪ್ರಮಾಣ ಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
2. ಕಾಮಗಾರಿ ನಿರ್ವಹಿಸಲು ಬೇಕಾದ ಆರ್ಥಿಕ ಸಾಮರ್ಥ್ಯ ಹೊಂದಿರವ ಬಗೆ ಟೆಂಡರ್ ಮೊಬಲಗಿನ ಶೇ.30ಕ್ಕೆ ಸಮನಾದ ಮೊಬಲಗಿನ (ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ) "Line of credit" ತಪ್ಪದೇ ನೀಡಬೇಕು.
3. ತಾಂತ್ರಿಕ ಪರಿಣತಿ ಹೊಂದಿದ ಸಿಬ್ಬಂದಿ ವಿವರ.
4. ಗುತ್ತಿಗೆದಾರರು ರಾಜ್ಯ ಮಾರಾಟ/ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ನೊಂದಣಿ ಮಾಡಿಸಿರುವ ಬಗ್ಗೆ ನೋಂದಣಿ ಪತ್ರದ ಪ್ರತಿ ಹಾಗೂ ತೀರುವಳಿ ಪತ್ರದ ಪ್ರತಿಯನ್ನು ತಾಂತ್ರಿಕ ಬಿಡ್‌ನೊಂದಿಗೆ ಲಗತ್ತಿಸತಕ್ಕದ್ದು.
5. ತಾಂತ್ರಿಕ ಬಿಡ್‌ಗಳ ಪುರಾವೆ ಲಗ್ತೀಕೃತ ಎಲ್ಲಾ ದಾಖಲೆಗಳನ್ನು ನೋಟರಿ/ಜಿಲ್ಲಾಮಟ್ಟದ ಅಧಿಕಾರಿಗಿಂತ ಕೆಳಗಿಲ್ಲದ ಶ್ರೇಣಿಯ ಅಧಿಕಾರಿಯವರಿಂದ ದೃಢೀಕರಿಸಿ ಸಲ್ಲಿಸಬೇಕು.
6. ಗುತ್ತಿಗೆದಾರರು ಐ.ಎಸ್. (I.S.) ಗುಣ ಮಟ್ಟಕ್ಕೆ ಸರಿಹೊಂದುವಂತಹ ಉಕ್ಕು, ಸಿಮೆಂಟ್ ಹಾಗೂ ಕಾಮಗಾರಿಗಳಿಗೆ ಬೇಕಾದ ಎಲ್ಲಾ ಸಾಮಗ್ರಿಗಳ ಸಂಗ್ರಹಕ್ಕೆ ಮತ್ತು ಯಂತ್ರೋಪಕರಣಗಳ ಬಗ್ಗೆ ತಮ್ಮ ಸ್ವಂತ ವ್ಯವಸ್ಥೆ ಮಾಡಿಕೊಳ್ಳಬೇಕು.

50% ಸ್ವಂತ, 50% ಲೀಸ್/ಬಾಡಿಗೆ

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಸಂಖ್ಯೆಗಳು | ಮಾಲೀಕತ್ವದ ಪುರಾವೆ |
|---|---|---|---|
| 1 | ಕಾಂಕ್ರೀಟ್ ಮಿಕ್ಸರ್ (10/7 ಸಿ.ಎ.ಟಿ.) | 3 | ಸ್ವಂತ / ಬಾಡಿಗೆ / ಲೀಸ್ |
| 2 | ಟಿಪ್ಪರ್‌ಗಳು | 3 | ಸ್ವಂತ / ಬಾಡಿಗೆ / ಲೀಸ್ |
| 3 | ಎಕ್ಸ್‌ಕವೇಟರ್‌ಗಳು | 1 | ಸ್ವಂತ / ಬಾಡಿಗೆ / ಲೀಸ್ |
| 4 | ಕಾಂಕ್ರೀಟ್ ವೈಬ್ರೇಟರ್‌ಗಳು (ಪಿನ್) | 3 | ಸ್ವಂತ / ಬಾಡಿಗೆ / ಲೀಸ್ |

ಎರಡನೇ ಲಕೋಟೆ ಫೈನಾನ್ಸಿಯಲ್ ಬಿಡ್ ಕುರಿತಂತೆ ಇರತಕ್ಕದ್ದು.

ಮೊದಲು ಟೆಕ್ನಿಕಲ್ ಬಿಡ್ ಬಗೆಗಿನ ಲಕೋಟೆಯನ್ನು ತೆರೆಯಲಾಗುವುದು. ಇದು ಸಮರ್ಪಕವಿದ್ದಲ್ಲಿ ಫೈನಾನ್ಸಿಯಲ್ ಬಿಡ್ ಲಕೋಟೆಯನ್ನು ತೆರೆಯಲಾಗುವುದು.

**ನಿಯಮಗಳು:**

i. ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಡಿಡಿ, ಪೇ–ಆರ್ಡರ್, ಬ್ಯಾಂಕರ್ಸ್ ಚೆಕ್ ಅಥವಾ ಕಾರ್ಯನಿರ್ವಾಹಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಮಂಗಳೂರು ಇವರ ಹೆಸರಿಗೆ ಪ್ಲೆಡ್ಜ್ ಮಾಡಿದ ಎನ್.ಎಸ್.ಸಿ. ರೂಪದಲ್ಲಿ ಸಲ್ಲಿಸಬೇಕು.

ii. **"ಫರ್‌ಫಾರ್ಮೆನ್ಸ್ ಸೆಕ್ಯೂರಿಟಿ" (ಸಾಧನಾ ಭದ್ರತೆ):** ಟೆಂಡರ್ ಅನುಮೋದನೆಗೊಂದ 20 ದಿನಗಳೊಳಗೆ, ಅನುಮೋದಿತ ಟೆಂಡರ್‌ದಾರರು ಇಲಾಖೆಗೆ ಅನುಮೋದನೆಗೊಂಡ ಟೆಂಡರ್ ಮೊತ್ತದ ಶೇ.5ರಷ್ಟು ಹಾಗೂ ಅಸಮತೋಲನ ಟೆಂಡರ್ ಏನಾದರೂ ಇದ್ದರೆ ಇದಕ್ಕೆ ಹೆಚ್ಚುವರಿ ಭದ್ರತಾ ಠೇವಣಿಯನ್ನು ಟೆಂಡರ್ ನಿಯಮ 25–5 ಹಾಗೂ ಗುತ್ತಿಗೆ ಕರಾರು ನಿಯಮಾವಳಿಗಳ ಕ್ಲಾಸ್–44ರ ರೀತ್ಯಾ ಸಾಧನಾ ಭದ್ರತಾ ಠೇವಣಿ ರೂಪದಲ್ಲಿ ಪಾವತಿ ಮಾಡತಕ್ಕದ್ದು. ಇದನ್ನು ನಗದು/ಬ್ಯಾಂಕರ್ಸ್ ಚೆಕ್/ಡಿಡಿ/ಪೇ–ಆರ್ಡರ್/ಬ್ಯಾಂಕ್ ಗ್ಯಾರಂಟಿ ಅಥವಾ ಪ್ಲೆಡ್ಜ್ ಎನ್.ಎಸ್.ಸಿ. ರೂಪದಲ್ಲಿ ಸಲ್ಲಿಸಬಹುದಾಗಿರುತ್ತದೆ.

iii. ಟೆಂಡರ್ ಶೆಡ್ಯೂಲ್‌ಗೆ ನೀಡಲಾದ ಹಣವನ್ನು ಯಾವುದೇ ಸಂದರ್ಭದಲ್ಲಿ ಹಿಂದಿರುಗಿಸಲಾಗುವುದಿಲ್ಲ. ಗುತ್ತಿಗೆದಾರರು ಅರ್ಜಿ ಸಲ್ಲಿಸುವಾಗ ಗುತ್ತಿಗೆ ನೋಂದಣಿ ಪುಸ್ತಕವನ್ನು ಹಾಗೂ ಇದೇ ಮಾದರಿಯ ಕಾಮಗಾರಿ ನಿರ್ವಹಿಸಿದ ಬಗ್ಗೆ ಪ್ರಮಾಣ ಪತ್ರವನ್ನು ತಪ್ಪದೇ ತರತಕ್ಕದ್ದು.

iv. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾಧಿಕಾರಿಯವರು ಹೊಂದಿರುತ್ತಾರೆ.

ಹೆಚ್ಚಿನ ವಿವರವನ್ನು ಕಛೇರಿ ಸಮಯದಲ್ಲಿ ಪಡೆದುಕೊಳ್ಳಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಮಂಗಳೂರು.

**MINOR IRRIGATION**

**Office of the Executive Engineer, Minor Irrigation Division, Mangalore-1**

**TENDER NOTIFICATION (Two cover system)**

**No.MID/MNG/E/TENDER-30/2009-10/2080, Dated: 14th September 2009**

Sealed item rate tenders in the prescribed form in duplicate are invited for the following work of Kodagu District, Somwarpet Taluk in two cover system by the undersigned as per Karnataka transparency Public procurements Act 1999 and Rules 2000 on behalf of Governor of Karnataka from the Class-I Contractors registered in K.P.W.D. of Karnataka State in Standard Tender Document KW-4. Completed tender will be received in the office of the Executive Engineer, M.I.Division, Mangalore upto 4.00 P.M. on 30.10.2009. Blank tender Schedules will be issued upto 29.10.2009. If possible, the technical bid will be opened on 30.10.2009.

| Sl. No. | Name of work | Amount put to tender | E.M.D. | Period of completion | Price of tender document |
|---|---|---|---|---|---|
| 1 | Improvements of Bandiyammana kere and canal, Improvements to Chami-kere and canal, Improvements to Aluru kere and canal and Construction of retaining wall for road of Alur Bandiyammana kere in Somwarpet Taluk, Kodagu District | 1,88,16,981.53 | 2,82,300.00 | 12 Months including rainy season. | 20,000.00 + Tax |

**Technical Bid Part-I:**

Applicant depending upon their bidding capacity satisfying the below mentioned qualifying conditions need only apply.

1. Each applicant should have in the last 5 years reckoned back from the year 2009-10 (from 2004-05 to 2008-09)
   - i. a. Achieved in the atleast two financial years a minimum annual financial turnover (in all cases Civil Engineering construction works only) two times the estimated amount put to tender.
   - i Financial turnover shall be given weightage of 10% per year based on the reference value to bring them to 2008-09 price level.
2. Availability for this work a project manager with not less than 5 years experience in Construction of similar Civil Engineering works and other key personnel with adequate experience as required.
3. Satisfactorily completed as a prime contractor atleast one work of value not less than 80% of the amount put to tender. (costing single work only) within presribed time after 2004-05.
4. Liquid assets/availability of credit facilities to the extent of 30% of the value of amount put to tender. (credit lines/letter of credit certified from banks for meeting the funds requirement etc.)

5. Details of technical staff (Structure and Organization)
6. Copies of K.S.T. registration certificates, K.S.T. clearance certificates.
7. The documents furnished by the contractor for technical qualification should be attested by Notary/district level officer regarding genuinity and truthfulness of the documents.
8. Contractor has to procure steel, cement etc., required for the works, confirming to I.S. standard at in his own cost

Availability (owned/lease/rented) of the following key and critical equiments for the works. (50% should be owned)

| | | |
|---|---|---|
| a. Concrete mixer (10/7 Cft.) | : | 3 |
| b. Tippers | : | 3 |
| c. Excavator | : | 1 |
| d. Concrete vibrators (Pin) | : | 3 |

**Second cover should consist of financial bid.**

The technical bid will be opened first and the financial bid of the contractors whose technical bids are found satisfactory will be opened thereafter.

**Rules:**

1. E.M.D. should be submitted in the form of D.D., Bankers Cheque, Pay Order in the name of Executive Engineer, M.I.Division, Mangalore, Pledged N.S.C. in the name of Executive Engineer, M.I. Division, Mangalore.
2. Contractors has to submit "Performance Security" within 20 days of receipt of the Letter of Acceptance, the successful Tenderer shall deliver to the Employer a Security deposit for an amount equalent 5% of the Contract price plus additional security for unbalance Tenders as per Tender Rule 25-5 in the form of cash/bankers cheque/D.D./Pay Order/Bank Guarantee or pludged N.S.C. in the name of Executive Engineer.
3. Cost of tender forms is not refundable. Contractors must produce the contractor's registration certificates and work done certificate of similar nature at the time of application.
4. Final acceptance of tenders vests with the competent authority who reserves the right to reject any or all the tenders without assigning any reason thereof.

Any additional information can be obtained from this office during working hours.

**N.T. RAJGOPAL**

P.R. 793 Executive Engineer, M.I.Division, Mangalore.

**ಔಷಧ ನಿಯಂತ್ರಣ ಇಲಾಖೆ**

**ಚೀಫ್ ಸೈಂಟಿಫಿಕ್ ಆಫೀಸರ್ ರವರ ಕಛೇರಿ, ಔಷಧ ಪರೀಕ್ಷಾ ಪ್ರಯೋಗಾಲಯ, ಅರಮನೆ ರಸ್ತೆ, ಬೆಂಗಳೂರು–1**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಔನಿಇ/ಔಪಪ್ರ/ಟಿ.ಐ.ಎ/01,02,03&04/09–10, ದಿನಾಂಕ: 22ನೇ ಸೆಪ್ಟೆಂಬರ್ 2009**

ಔಷಧ ನಿಯಂತ್ರಣ ಇಲಾಖೆ ಮತ್ತು ಔಷಧ ಪರೀಕ್ಷಾ ಪ್ರಯೋಗಾಲಯಕ್ಕೆ ಬೇಕಾಗಿರುವ (1) ಯೂ.ವಿ.ಸ್ಪೆಕ್ಟ್ರೋಫೋಟೋಮೀಟರ್ (2) ಲಿಕ್ವಿಡ್ ಪಾರ್ಟಿಕಲ್ ಕೌಂಟರ್ ಹಾಗೂ (3) ಭದ್ರತಾ ಸಿಬ್ಬಂದಿಯ ಸೇವೆ ಮತ್ತು (4) ಸ್ವಚ್ಛತಾ ನಿರ್ವಹಣೆಗೆ ಒಂದು ವರ್ಷದ ಅವಧಿಗೆ ಒದಗಿಸಲು ಅರ್ಹ ಸರಬರಾಜುದಾರರು ಹಾಗೂ ಮಾನವ ಸೇವಾ ಸಂಸ್ಥೆ ಅಥವಾ ಏಜೆನ್ಸಿಗಳಿಂದ ಮೊಹರಾದ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಟೆಂಡರ್ ನಮೂನೆಯ ಶುಲ್ಕ (1) ಯೂ.ವಿ.ಸ್ಪೆಕ್ಟ್ರೋಫೋಟೋಮೀಟರ್ ರೂ.287/– (2) ಲಿಕ್ವಿಡ್ ಪಾರ್ಟಿಕಲ್ ಕೌಂಟರ್ ರೂ.210/– ಹಾಗೂ (3) ಭದ್ರತಾ ಸಿಬ್ಬಂದಿಯ ಸೇವೆ ರೂ.100/– ಮತ್ತು (4) ಸ್ವಚ್ಛತಾ ನಿರ್ವಹಣೆಗೆ ರೂ.100/– ಟೆಂಡರ್ ಫಾರಂಗಳನ್ನು ದಿನಾಂಕ:25.09.09 ರಿಂದ ಕಛೇರಿ ಕೆಲಸದ ದಿನಗಳಂದು ಸಂಜೆ 4.00 ಗಂಟೆಯವರೆಗೆ ನಗದು ಪಾವತಿಸಿ ಪಡೆಯಬಹುದು. ಟೆಂಡರ್ ಫಾರಂಗಳನ್ನು ಪಡೆಯಲು ಕೊನೆಯ ದಿನಾಂಕ:24.10.09 ಮೊಹರಾದ ಟೆಂಡರ್‌ಗಳನ್ನು ದಿನಾಂಕ: 26.10.09 ರಂದು ಸಂಜೆ 4.00 ಗಂಟೆಯೊಳಗೆ ಟೆಂಡರ್ ಆಹ್ವಾನ ಪ್ರಾಧಿಕಾರ ಸಮಿತಿ, ಚೀಫ್ ಸೈಂಟಿಫಿಕ್ ಆಫೀಸರ್‌ರವರ ಕಚೇರಿ, ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು, ಇವರಿಗೆ ಸಲ್ಲಿಸತಕ್ಕದ್ದು. ಟೆಂಡರ್‌ನ್ನು ತೆರೆಯುವ ದಿನಾಂಕ:27.10.09 ರಂದು ಬೆಳಿಗ್ಗೆ 11.00

ಗಂಟೆಗೆ. ಟೆಂಡರ್ ತೆರೆಯುವ ದಿನಾಂಕದಂದು ರಜೆಯೆಂದು ಘೋಷಿಸಲ್ಪಟ್ಟರೆ ಮುಂದಿನ ಕೆಲಸದ ದಿನದಂದು ಟೆಂಡರ್ ತೆರೆಯಲಾಗುವುದು. ಇತರೆ ವಿವರಗಳನ್ನು ಸದರಿ ಕಛೇರಿಯಿಂದ ಪಡೆಯಬಹುದು.

ಅಧ್ಯಕ್ಷರು
ಟೆಂಡರ್ ಆಹ್ವಾನ ಪ್ರಾಧಿಕಾರ ಸಮಿತಿ
ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು–560 001

**DRUGS CONTROL DEPARTMENT**

**Office of the Chief Scientific Officer, Drugs Testing Laboratory, Palace Road, Bangalore-1**

**TENDER NOTIFICATION**

**No.DCD/DTL/TIA/01,02,03&04/2009-10, Dated: 22nd September 2009**

Sealed Tenders are invited by the Chairman, Committee for Tender Inviting Authority & Drugs Testing Laboratory, Bangalore.

**for the supply of** 1) U.V Spectrophotometer
2) Liquid Particle Counter,
**and providing** 3) Security Services and
4) House Keeping Services in Drugs Control Department including laboratories for a period of one year.

The tender forms can be obtained from the office of the Chief Scientific Officer, Drugs Testing Laboratory, Palace Road, Bangalore-1 on payment of
Rs 287/- (Rupees Two Hundred Eighty Seven) for U.V. Spectrophotometers.
Rs 210/- (Rupees Two Hundred and Ten) Liquid Particle Counter and
Rs 100/- (Rupees One Hundred) each for Security Service and House Keeping by cash on any working day up to date till 4 P.M. The last date for sale of tender forms is 24.10.2009 The last date for receipt of tender form is 26.10.09 The tender will be opened on 27.10.2009 at 11.00 A.M. If 27.10.2009 happens to be holiday, the tenders will be opened on the next working day. The tender forms will be issued from 25.09.2009.

Chairman,
P.R. 801 Committee for Tender Inviting Authority, Drug Testing Laboratory, Bangalore-1

**ಕರ್ನಾಟಕ ಲೋಕಸೇವಾ ಆಯೋಗ**

**ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ", ಬೆಂಗಳೂರು**

**ತಿದ್ದುಪಡಿ**

**ಸಂಖ್ಯೆ: ಇಪ(1)1523/2009–10/ಪಿಎಸ್‌ಸಿ, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2009**

ಆಯೋಗವು 2008ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆ ಫಲಿತಾಂಶವನ್ನು ಅಧಿಸೂಚನೆ ಸಂಖ್ಯೆ.ಇಪ(1)905/2008–09/ಪಿಎಸ್‌ಸಿ ದಿನಾಂಕ:10.06.2009ರಂದು ಪ್ರಕಟಿಸಿದ್ದು, ಅದರಲ್ಲಿ ಈ ಕೆಳಕಂಡ ಅಭ್ಯರ್ಥಿಯ ಫಲಿತಾಂಶವನ್ನು ತಡೆಹಿಡಿಯಲಾಗಿತ್ತು. ಈಗ ಅಭ್ಯರ್ಥಿಯ ಫಲಿತಾಂಶವನ್ನು ತಡೆಹಿಡಿದಿರುವುದನ್ನು ರದ್ದುಪಡಿಸಿರುವ ಹಿನ್ನೆಲೆಯಲ್ಲಿ 2008ನೇ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಫಲಿತಾಂಶವನ್ನು ತಿದ್ದುಪಡಿ ಮೂಲಕ ಪ್ರಕಟಿಸಿದೆ.

**ಅಪೆಂಡಿಕ್ಸ್ 'ಎ'**

**ಮೈಸೂರು ಕೇಂದ್ರ**

ನೋಂದಣಿ ಸಂಖ್ಯೆ. 60735 ರಡಿ ಜನರಲ್ ಲಾ ಭಾಗ–1 ಸಾಮಾನ್ಯ ದರ್ಜೆಯಲ್ಲಿ ಮತ್ತು ಭಾಗ–2 ವಿಷಯದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಿರುತ್ತಾರೆ.

**ಅಪೆಂಡಿಕ್ಸ್ 'ಸಿ'**

**ಮೈಸೂರು ಕೇಂದ್ರ**

ನೋಂದಣಿ ಸಂಖ್ಯೆ. 60735ರಡಿ ಅಕೌಂಟ್ಸ್ ಹೈಯರ್ ಪತ್ರಿಕೆ–1ರಲ್ಲಿ ವಿನಾಯಿತಿ ಹೊಂದಿರುತ್ತಾರೆ.

**ವಿ.ಬಿ. ಪಾಟೀಲ್**
ಕಾರ್ಯದರ್ಶಿ,
ಪಿ.ಆರ್. 794 ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬಳ್ಳಾರಿ

### ಅಧಿಸೂಚನೆ

**ನಂ.ಕಂ. ಗ್ರಾಲೆಸಿ:126:2008–09, ದಿನಾಂಕ: 26ನೇ ಸೆಪ್ಟೆಂಬರ್ 2009**

**ವಿಷಯ:** ಬಳ್ಳಾರಿ ಜಿಲ್ಲೆ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ ಆರ್.ಡಿ.299.ಬಿಎಸ್‌ಸಿ 2006 ದಿ: 03–2–2009 ಮತ್ತು 24–07–2009 ಹಾಗೂ 08–9–2009.

2. ಈ ಕಾರ್ಯಾಲಯದ ಅಧಿಸೂಚನೆ ಸಮ ಸಂಖ್ಯೆ ದಿನಾಂಕ: 28–2–2009

ಬಳ್ಳಾರಿ ಜಿಲ್ಲೆ ಕಂದಾಯ ಇಲಾಖಾ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ಈ ಕಾರ್ಯಾಲಯದ ಉಲ್ಲೇಖ (2) ರ ಅಧಿಸೂಚನೆ ಸಮ ಸಂಖ್ಯೆ ದಿನಾಂಕ 28.2.2009 ರಲ್ಲಿ ಅರ್ಜಿಗಳನ್ನು ಕರೆಯಲಾಗಿತ್ತು. ಸದ್ರಿ ನಿಯಮಗಳಲ್ಲಿ ಪಿ.ಯು.ಸಿ. ಅಥವಾ ತತ್ಸಮಾನ ಎಂದು ವಿದ್ಯಾರ್ಹತೆ ನಿಗದಿಪಡಿಸಲಾಗಿತ್ತು. ತತ್ಸಮಾನ ಹುದ್ದೆ ಯಾವುದು ಎಂಬ ಬಗ್ಗೆ ಅಳವಡಿಸಿ ಪರಿಷ್ಕೃತ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂ.ಇ.299.ಬಿಎಸ್‌ಸಿ.2006 ದಿನಾಂಕ 24.7.2009 ರಲ್ಲಿ ಪ್ರಕಟಿಸಲಾಗಿದೆ. ಪರಿಷ್ಕೃತ ನಿಯಮಗಳಂತೆ ನೇರ ನೇಮಕಾತಿ ಮಾಡಬೇಕಾಗಿರುವುದರಿಂದ ಈ ಹಿಂದೆ ನೇಮಕಾತಿ ಮಾಡಲು ಉಲ್ಲೇಖ (2) ರ ಮೂಲಕ ಅರ್ಜಿ ಕರೆದಿರುವ ಪ್ರಕ್ರಿಯೆಯನ್ನು ಸಂಪೂರ್ಣವಾಗಿ ರದ್ದುಪಡಿಸಿದೆ. ಹಾಗೂ ಅರ್ಜಿದಾರರಿಂದ ಪಡೆದ ಅರ್ಜಿಯ ಶುಲ್ಕವನ್ನು ಅರ್ಜಿದಾರರಿಗೆ ಹಿಂತಿರುಗಿಸಲಾಗುವುದು.

ಸರ್ಕಾರದ ಅಧಿಸೂಚನೆ ಸಂ.ಕಂ.ಇ. 299.ಬಿಎಸ್‌ಸಿ.2006 ದಿನಾಂಕ 24.7.2009 ರಂದು ಪ್ರಕಟಿಸಲಾದ ಪರಿಷ್ಕೃತ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಬಳ್ಳಾರಿ ಜಿಲ್ಲೆ ಕಂದಾಯ ಇಲಾಖೆ, ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಅರ್ಜಿಗಳನ್ನು ಈ ಮೂಲಕ ಕರೆಯಲಾಗಿದೆ.

**ಅರ್ಹ ಅಭ್ಯರ್ಥಿಗಳು ಭರ್ತಿ ಮಾಡಿದ ನಿಗದಿತ ನಮೂನೆಯಲ್ಲಿ ಎಲ್ಲಾ ವಿವರಗಳೊಂದಿಗೆ ಅಧ್ಯಕ್ಷರು ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರಿಗೆ ದಿನಾಂಕ: 30–10–2009 ರಂದು ಸಂಜೆ 5–30 ಗಂಟೆಯೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ತಲುಪುವಂತೆ ಅಂಚೆ ಅಥವಾ ಕೊರಿಯರ್ ಮೂಲಕ ಮಾತ್ರ ಕಳುಹಿಸತಕ್ಕದ್ದು. ಭರ್ತಿ ಮಾಡಿರುವ ಅರ್ಜಿಗಳನ್ನು ನೇರವಾಗಿ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದಿಲ್ಲ.**

1. **ಖಾಲಿ ಇರುವ ಹುದ್ದೆಗಳ ವಿವರ: 69**

ಮೀಸಲಾತಿ ವರ್ಗಗಳು ಈ ಕೆಳಗಿನಂತಿವೆ.

| ಕ್ರ.ಸ. | ವರ್ಗ | ಹುದ್ದೆಗಳು | ಸಾಮಾನ್ಯ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ | ಗ್ರಾಮಿಣ ಅಭ್ಯರ್ಥಿ | ಅಂಗ ವಿಕಲ ಅಭ್ಯರ್ಥಿ | ಮಾಜಿ ಸೈನಿಕರು | ಕನ್ನಡ ಮಾಧ್ಯಮ ಅಭ್ಯರ್ಥಿ | ಯೋಜನಾ ನಿರಾಶ್ರಿತರು |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಸಾಮಾನ್ಯ | 34 | 07 | 10 | 09 | 02 | 03 | 02 | 01 |
| 2 | ಪ.ಜಾತಿ | 11 | 03 | 03 | 03 | 01 | 01 | – | – |
| 3 | ಪ.ಪಂ. | 02 | 01 | 01 | –– | – | –– | – | – |
| 4 | ಪ್ರವರ್ಗ1 | 03 | 01 | 01 | 01 | – | –– | – | – |
| 5 | ಪ್ರವರ್ಗ2ಎ | 11 | 03 | 03 | 03 | 01 | 01 | – | – |
| 6 | ಪ್ರವರ್ಗ2ಬಿ | 03 | 01 | 01 | 01 | – | –– | – | – |
| 7 | ಪ್ರವರ್ಗ3ಎ | 02 | 01 | 01 | –– | – | –– | – | – |
| 8 | ಪ್ರವರ್ಗ3ಬಿ | 03 | 01 | 01 | 01 | – | – | – | – |
| | **ಒಟ್ಟು** | **69** | **18** | **21** | **18** | **04** | **05** | **02** | **01** |

2. **ವಿದ್ಯಾರ್ಹತೆ:** Must have passed P.U.C. or 12th std. Examination conducted by the Central Board of Secondary Education or ICSE.

3. **ವಯೋಮಿತಿ:**

| | | | |
|---|---|---|---|
| 1. | ಪ.ಜಾತಿ/ಪ.ಪಂಗಡ ಮತ್ತು ಪ್ರವರ್ಗ 01 | ಕನಿಷ್ಟ – 18ವರ್ಷ | ಗರಿಷ್ಟ– 40 ವರ್ಷ |
| 2. | ಹಿಂದುಳಿದ ವರ್ಗ | ಕನಿಷ್ಟ – 18 ವರ್ಷ | ಗರಿಷ್ಟ– 38 ವರ್ಷ |
| 3. | ಸಾಮಾನ್ಯ ವರ್ಗ | ಕನಿಷ್ಟ – 18ವರ್ಷ | ಗರಿಷ್ಟ– 35 ವರ್ಷ |

**ವಯೋಮಿತಿ ಸಡಲಿಕೆ:**

1. ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವರು ಕೇಂದ್ರದ ಸಶಸ್ತ್ರ ದಳದಲ್ಲಿ ಎಷ್ಟು ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.
2. ಅಭ್ಯರ್ಥಿಯು ವಿಧವೆ ಆಗಿದ್ದಲ್ಲಿ 10 ವರ್ಷಗಳು
3. ಅಂಗವಿಕಲರಾಗಿದ್ದರೆ 10 ವರ್ಷಗಳು

**ಅಭ್ಯರ್ಥಿಗಳಿಗೆ ಸೂಚನೆ ಮತ್ತು ಷರತ್ತುಗಳು:**

1. ಸರ್ಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ನೇಮಕಾತಿ ಪ್ರಾಧಿಕಾರದಿಂದ ಪರವಾನಿಗೆ ಪಡೆದು ಲಗತ್ತಿಸತಕ್ಕದ್ದು
2. ಜಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಜಾತಿ ಹಾಗೂ ಪ್ರಮಾಣ ಪತ್ರದ ಬಗ್ಗೆ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
3. ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರ ಮಾನ್ಯ ಜಿಲ್ಲಾಧಿಕಾರಿಗಳು, ಬಳ್ಳಾರಿ ರವರು ಕಾಯ್ದಿರಿಸಿಕೊಂಡಿರುತ್ತಾರೆ.
4. ನೇಮಕಾತಿಯನ್ನು ಮೆರಿಟ್ ಆಧಾರದ ಮೇರೆಗೆ ಮಾತ್ರ ನೇಮಕಾತಿ ಮಾಡಲಾಗುವುದು.
5. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ.
6. ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿ ಸಲ್ಲಿಸಬೇಕು ಅರ್ಜಿಯನ್ನು ಜಿಲ್ಲಾಧಿಕಾರಿಗಳ ಕಛೇರಿಯ Website **www.bellary.nic.in** ಯಿಂದ ಡೌನ್ ಲೋಡ್ ಮಾಡಿಕೊಳ್ಳಬಹುದು. ಅಭ್ಯರ್ಥಿಗಳಿಗೆ ಜಿಲ್ಲಾಧಿಕಾರಿಗಳ ಕಛೇರಿಯಿಂದ ಅರ್ಜಿಯನ್ನು ಒದಗಿಸಲಾಗುವುದಿಲ್ಲ. ಲಕೋಟೆಯ ಮೇಲೆ ಅರ್ಜಿ ಸಲ್ಲಿಸುವ ಹುದ್ದೆಯ ಹೆಸರು ನಮೂದಿಸಿರಬೇಕು.
7. ನಿಗದಿತ ದಿನಾಂಕದ ನಂತರ ಸಲ್ಲಿಸಿದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.
8. ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಸೈಜಿನ ಭಾವಚಿತ್ರವೊಂದನ್ನು ಅರ್ಜಿಯ ಬಲಗಡೆ ಮೇಲ್ಭಾಗದಲ್ಲಿ ಕಡ್ಡಾಯವಾಗಿ ಅಂಟಿಸತಕ್ಕದ್ದು.
9. ಅಭ್ಯರ್ಥಿಗಳ ಆಯ್ಕೆ ಬಗ್ಗೆ ಪ್ರಚಾರ ಅಥವಾ ಶಿಫಾರಸ್ಸುಗಳನ್ನು ಮಾಡಿದರೆ ಅಂಥವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
10. ಅರ್ಜಿದಾರರೊಡನೆ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.
11. ಜಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು ಮತ್ತು ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
12. ಪ.ಜಾತಿ/ ಪ.ಪಂಗಡ ಮತ್ತು ಪ್ರವರ್ಗ–1 ಅಭ್ಯರ್ಥಿಗಳು ರೂ.100/– ಹಾಗೂ ಇತರರಿಗೆ ರೂ.300/– ಗಳಿಗೆ ಬ್ಯಾಂಕ್ ಡಿ.ಡಿ.ಯನ್ನು ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು ಮತ್ತು ಡಿ.ಡಿ. ಗಳನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಮಾತ್ರ ಖರೀದಿಸತಕ್ಕದ್ದು ಹಾಗೂ ಡಿ.ಡಿ. ಯ ಹಿಂದೆ ತಮ್ಮ ಹೆಸರು ಮತ್ತು ಪೂರ್ಣ ಅಂಚೆ ವಿಳಾಸವನ್ನು ನಮೂದಿಸತಕ್ಕದ್ದು, ಮತ್ತು ಡಿ.ಡಿ.ಜೆರಾಕ್ಸ್ ಪ್ರತಿಯನ್ನು ತಮ್ಮಲ್ಲಿ ಇಟ್ಟುಕೊಳ್ಳತಕ್ಕದ್ದು.

    **ಡಿ.ಡಿ.ಗಳನ್ನು ಲಗತ್ತಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

13. ಸಹಿ ಮಾಡದಿರುವ ಹಾಗೂ ಅಪೂರ್ಣವಾಗಿ ಭರ್ತಿ ಮಾಡಿರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
14. ಅಂಚೆ ವಿಳಂಬಕ್ಕೆ ಜಿಲ್ಲಾಧಿಕಾರಿಗಳ ಕಛೇರಿ ಜವಾಬ್ದಾರರಾಗುವುದಿಲ್ಲ.
15. ಜಾತಿ/ಮೀಸಲಾತಿ ಪ್ರಮಾಣ ಪತ್ರಗಳು:

ಮೀಸಲಾತಿ ಸೌಲಭ್ಯ ಅಪೇಕ್ಷಿಸುವ ಅಭ್ಯರ್ಥಿಗಳು ಈ ಕೆಳಕಂಡ ದಾಖಲೆಗಳ ಪ್ರತಿಗಳನ್ನು ಅರ್ಜಿ ಸಲ್ಲಿಸುವ ದಿನಾಂಕದಂದು ನಿಗದಿತ ನಮೂನೆಯಲ್ಲಿ ಸಂಬಂಧಪಟ್ಟ ರೆವಿನ್ಯೂ ಪ್ರಾಧಿಕಾರದಿಂದ ಪಡೆದು ಲಗತ್ತಿಸಬೇಕು. ತಪ್ಪಿದ್ದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ನಿಯಮಾನುಸಾರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು. ಮೀಸಲಾತಿ ಪ್ರಮಾಣ ಪತ್ರಗಳು, ಜಾತಿ, ಆದಾಯ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರಬೇಕು.

**16. ಯೋಜನೆ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು:**

ಸರ್ಕಾರಿ ಆದೇಶ ಸಂ:ಸಿ ಆ ಸು ಇ 71 ಸೇ ನೆ ನಿ 2001 ದಿನಾಂಕ:24–10–2002 ರನ್ವಯ ಶೇಕಡ 5 ರಷ್ಟು ಹುದ್ದೆಗಳನ್ನು ಯೋಜನಾ ನಿರಾಶ್ರಿತರ ಗುಂಪಿಗೆ ಮೀಸಲಿಡಲಾಗಿದೆ. ಈ ಹುದ್ದೆಗಳನ್ನು ಕ್ಲೇಮ್ ಮಾಡುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರರು ನೀಡಿದ ಪ್ರಮಾಣ ಪತ್ರಗಳನ್ನು ಲಗತ್ತಿಸಬೇಕು.

**17. ಮಾಜಿ ಸೈನಿಕರ ಕುಟುಂಬದ ಅಭ್ಯರ್ಥಿಗಳು:**

ಮಾಜಿ ಸೈನಿಕರು ಎನ್ನುವ ಬಗ್ಗೆ ಅಥವಾ ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುತ್ತಿರುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರು ಎಂಬ ಬಗ್ಗೆ ಸಕ್ಷಮ ಮಿಲಿಟರಿ ಅಧಿಕಾರಿಗಳಿಂದ ಪ್ರಮಾಣ ಪತ್ರಗಳನ್ನು ಪಡೆದಿರಬೇಕು.

**18. ಅಂಗವಿಕಲ ಕುಟುಂಬದ ಅಭ್ಯರ್ಥಿಗಳು:**

ಅಂಗವಿಕಲ ಅಭ್ಯರ್ಥಿ ಎಂದರೆ, ಸರ್ಕಾರದ ಆದೇಶ ಸಂ: ಡಿ ಪಿ ಎ ಆರ್ 52 ಎಸ್ ಆರ್ ಆರ್ 99 ದಿನಾಂಕ:29–11–2002 ರಂತೆ

(ಎ) ಕುಷ್ಠರೋಗ ನಿವಾರಿತರು

(ಬಿ) ಶ್ರವಣ ದೋಷ ಉಳ್ಳವರು ಅಂದರೆ 70 ಡೆಸಿಬಲ್ಸ್ ಮತ್ತು ಅದಕ್ಕಿಂತ ಹೆಚ್ಚು

(ಸಿ) ಮೂಳೆಗಳು, ಮಾಂಸಖಂಡಗಳು ಮತ್ತು ಕೀಲುಗಳ ವಾಡಿಕೆಯ ಕಾರ್ಯ ನಿರ್ವಹಣೆಗೆ ಅಡಚಣೆಯಾಗುವಂತಹ ದೈಹಿಕ ದೋಷ ಅಥವಾ ವಿಕಲತೆ ಹೊಂದಿರುವ ವ್ಯಕ್ತಿಗಳು ಅರ್ಹರಾಗಿರುವುದಿಲ್ಲ.

(ಡಿ) ರಾಜ್ಯದ ಸರ್ಕಾರಿ ಜಿಲ್ಲಾ ಮತ್ತು ತಾಲೂಕು ಆಸ್ಪತ್ರೆಗಳಲ್ಲಿರುವ ವೈದ್ಯರು ಅಂಗವಿಕಲರಿಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ನೀಡಲು ಅಧಿಕಾರ ಹೊಂದಿದವರಾಗಿರುತ್ತಾರೆ.

ಸರ್ಕಾರದ ಆದೇಶ ಸಂ:ಡಿ ಪಿ ಎ ಆರ್ 07 ಸೇ ಸೈ ಅ 94 ದಿನಾಂಕ: 13–09–1995 ರಲ್ಲಿ ನಿಗದಿಪಡಿಸಿರುವ ವೈದ್ಯಕೀಯ ಪ್ರಮಾಣ ಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

**19. ಗ್ರಾಮೀಣ ಅಭ್ಯರ್ಥಿಗಳು:**

ಗ್ರಾಮೀಣ ಅಭ್ಯರ್ಥಿ ಎಂದರೆ, ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯ ಎಸ್.ಎಸ್.ಎಲ್.ಸಿ. ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ದೃಢೀಕೃತ ಗ್ರಾಮೀಣ ಪತ್ರವನ್ನು ಲಗತ್ತಿಸತಕ್ಕದ್ದು, ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು, ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ರ ಪ್ರಮಾಣ ಪತ್ರವಲ್ಲದೇ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದು ಅದರ ಒಂದೊಂದು ಫೋಟೋ ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು ಅಂತೆಯೇ ಗ್ರಾಮೀಣ ಮೀಸಲಾತಿ ಕೋರಿರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ 2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ– 2 ರಲ್ಲಿ ನಿಗದಿತ ಪ್ರಾಧಿಕಾರಿಗಳಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲು ರುಜು ಮತ್ತು ಮೊಹರು ಮಾಡಿಸಿಕೊಂಡು ಅದರ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**20. ಕನ್ನಡ ಮಾಧ್ಯಮ ಅಭ್ಯರ್ಥಿಗಳು:**

ಸರ್ಕಾರದ ಅಧಿಸೂಚನೆ ಸಂ:ಐ ಪಿ ಎ ಆರ್ 71 ಎಸ್ ಆರ್ ಆರ್ 2001 ದಿನಾಂಕ: 24–10–2002 ರಂದು ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು.

1977 ರ ನಿಯಮ (9) (1) (ಸಿ) ರನ್ವಯ ಅಭ್ಯರ್ಥಿಯು 1 ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

**21. ಅರ್ಹತಾ ಷರತ್ತುಗಳು:**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಇ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹತೆಯೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**23. ಕೆಳಕಂಡ ದಾಖಲೆಗಳನ್ನು ಅರ್ಜಿಯ ಜೊತೆಗೆ ಲಗತ್ತಿಸಿದೆಯೇ ಎಂದು ಖಚಿತಪಡಿಸಿಕೊಳ್ಳುವುದು.**

- ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ/ ಪ್ರಮಾಣ ಪತ್ರ ಮತ್ತು ಕಂಪ್ಯೂಟರ್ ಜ್ಞಾನದ ಬಗ್ಗೆ ದಾಖಲೆ
- ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. / ವರ್ಗಾವಣೆ ಪ್ರಮಾಣ ಪತ್ರ
- ಸೈನಿಕ ಸೇವೆಯಿಂದ ಬಿಡುಗಡೆಯಾದ /ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಮೀಸಲಾತಿ ಕೋರಿದ್ದಲ್ಲಿ)
- ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ 2ಎ, 2ಬಿ, 3ಎ, 3ಬಿ ಪ್ರಮಾಣ ಪತ್ರಗಳು (ಮೀಸಲಾತಿ ಕೋರಿದ್ದಲ್ಲಿ)
- ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ವಿಧವೆಯಾದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

ಮೇಲ್ಕಂಡಂತೆ ನಿಗದಿಪಡಿಸಿದ ದಾಖಲೆಗಳನ್ನು ಸಲ್ಲಿಸದಿದ್ದಲ್ಲಿ ಅರ್ಜಿಗಳನ್ನು ತಿರಸ್ಕರಿಸಲಾಗುವುದು

**24. ಇತರೆ ಸೂಚನೆಗಳು:**

1. ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.
2. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ

**ಅರ್ಜಿ (ನಮೂನೆ)**

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬಳ್ಳಾರಿ**

**Deputy Commissioner Office, Bellary**

**ಅಧಿಸೂಚನೆ ಸಂ:ಕಂ:ಗಾಲೆಸಿ 126/08–09, ದಿನಾಂಕ: 26–09–2009**

**ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗೆ ಅರ್ಜಿ**

**Application for Village Accountant Post**

ಫೋಟೋ

| | | | | | |
|---|---|---|---|---|---|
| 1 | ಎ.ಹೆಸರು/ Name<br>ಬಿ. ತಾಯಿಯ ಹೆಸರು/ Mother Name<br>ಸಿ. ತಂದೆಯ ಹೆಸರು/ Father Name | | | | |
| 2 | ಲಿಂಗ/ Gender<br>ಪುರುಷ /Male ಮಹಿಳೆ/Female | | | | |
| 3 | ಜನ್ಮ ದಿನಾಂಕ<br>(ಎಸ್.ಎಸ್. ಎಲ್.ಸಿ. ಪ್ರಮಾಣ ಪತ್ರದಲ್ಲಿದ್ದಂತೆ)<br>Date of Birth As in SSLC Marks card | **ದಿನಾಂಕ** | **ತಿಂಗಳು** | **ವರ್ಷ** | **ವಯಸ್ಸು** |
| 4 | ಕೋರಿರುವ ಮೀಸಲಾತಿ / Reservation claimed 1) ಸಾ.ಅ / GM, 2). ಪಜಾ/SC, 3) ಪಪಂ/ST, 4) ಪ್ರವರ್ಗ1/CAT I 5)2ಎ/ 2A, 6) 2ಬಿ/2B, 7) 3ಎ/3A, 8)3ಬಿ/3B. | | | | |
| 4ಎ | ಉಪ ಜಾತಿ /Sub Caste | | | | |
| 4ಬಿ | ನೀವು ಕೆಳಗಿನ ಮೀಸಲಾತಿಗಳಲ್ಲಿ ಬರುವಿರಾ ?<br>ಹಾಗಿದ್ದಲ್ಲಿ ಸೂಕ್ತ ಪ್ರಮಾಣ ಪತ್ರ ಲಗತ್ತಿಸಿ. | | | | |

| | | |
|---|---|---|
| | 1) ಗ್ರಾಮೀಣ /Rural, 2) ಕಮಾಅ/KMS, 3)ಮಾಜಿಸೈ/ Ex Military Person, 4) ಯೋ.ಅ/ POP, 5)ಅಂಗವಿಕಲ/ PHP | |
| 5 | ನೀವು ಸರ್ಕಾರಿ ಸೇವೆಯಲ್ಲಿರುವಿರಾ / Are you in Government Service<br>ಹೌದು / Yes | |
| 6 | ನೀವು ಎಸ್.ಎಸ್.ಎಲ್.ಸಿ. ಅಥವಾ ಅದಕ್ಕೆ ತತ್ಸಮಾನತೆಯ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್. ಎಲ್.ಸಿ ಗಿಂತ ಮೇಲ್ಮಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಮುಖ್ಯ ಭಾಷೆ/ದ್ವಿತೀಯ ಭಾಷೆ. ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗಮಾಡಿ ತೇರ್ಗಡೆಯಾಗಿರುವಿರಾ / ಹಾಗಿದ್ದಲ್ಲಿ ಸೂಕ್ತ ಪ್ರಮಾಣ ಪತ್ರ ಲಗತ್ತಿಸಿ.<br>ಹೌದು /Yes ಇಲ್ಲ/ No | |
| 7 | ಲೋಕಸೇವಾ ಆಯೋಗದಿಂದ ಈ ಹಿಂದೆ ನಡೆಸಲ್ಪಟ್ಟ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಲ್ಲಿ ಪರೀಕ್ಷೆ ನಡೆದ ದಿನಾಂಕ ಮತ್ತು ನೊಂದಣಿ ಸಂಖ್ಯೆ ನಮೂದಿಸುವುದು. | |
| 8 | ವಿದ್ಯಾರ್ಹತೆ: 1) ಪಿ.ಯು.ಸಿ ಅಥವಾ 12th std Examination conducted by the Central Board of Secondary Education or ICSE | ಗರಿಷ್ಠ ಅಂಕಗಳು ಪಡೆದಿರುವ ಅಂಕಗಳು ಶೇಕಡ<br>1) ಪಿ.ಯು.ಸಿ :<br>2) 12th Std :<br>3) ICSE : |
| 9 | ಹೆಸರು ಮತ್ತು ಪೂರ್ಣ ವಿಳಾಸ:<br>ಹೆಸರು/Name<br>ವಿಳಾಸ/Address<br>ದೂರವಾಣಿ/ Phone No<br>Pin: | |
| 10 | ಶುಲ್ಕ ಪಾವತಿಯ ವಿವರ<br>ಡಿ.ಡಿ.ನಂ.<br>ದಿನಾಂಕ | 1) ಬ್ಯಾಂಕ್ ಹೆಸರು & ಸ್ಥಳ:<br>2) ಡಿ.ಡಿ.ಸಂಖ್ಯೆ & ದಿನಾಂಕ:<br>3) ಮೊತ್ತ : |

ಸ್ಥಳ:– (ಸಹಿ)

ದಿನಾಂಕ:– (Signature)

ಪಿ.ಆರ್. 816

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬಳ್ಳಾರಿ ಜಿಲ್ಲೆ, ಬಳ್ಳಾರಿ**

**ತಿದ್ದುಪಡಿ ಅಧಿಸೂಚನೆ**

**ನಂ.ಕಂ. ಸಿಬ್ಬಂದಿ.3/ಗ್ರಾಲೆಸಿ/126/2008–09, ದಿನಾಂಕ: 29ನೇ ಸೆಪ್ಟೆಂಬರ್ 2009**

**ವಿಷಯ:** ಬಳ್ಳಾರಿ ಜಿಲ್ಲೆಯ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** 1. ಈ ಕಾರ್ಯಾಲಯದ ಅಧಿಸೂಚನೆ ಸಂ. ಕಂ.ಗಾಲೆಸಿ.126.08.09 ದಿನಾಂಕ 26.9.2009.

2. ಸರ್ಕಾರದ ಸುತ್ತೋಲೆ ಸಂ. ಕಂಇ.34.ಪ್ರಕಾ.2009. ದಿನಾಂಕ 26.9.2009.

ಈ ಕಾರ್ಯಾಲಯದ ಅಧಿಸೂಚನೆ ಸಂ. ಕಂ.ಗ್ರಾಲೆಸಿ.126/2008.09 ದಿನಾಂಕ 26.9.2009ರ ಪುಟ (3)ರ ಕ್ರಮ ಸಂಖ್ಯೆ (12) ರಲ್ಲಿ ನಿಗದಿತ ಶುಲ್ಕವನ್ನು ಪ.ಜಾತಿ/ಪ.ಪಂಗಡ ಮತ್ತು ಪ್ರವರ್ಗ–1 ಅಭ್ಯರ್ಥಿಗಳು ರೂ.100/– ಹಾಗೂ ಇತರರಿಗೆ ರೂ 300/– ಗಳು ಎಂದು ಪ್ರಕಟಿಸಲಾಗಿದೆ. ಇದರ ಬದಲಾಗಿ ಪ.ಜಾತಿ/ಪ.ಪಂ. ಹಾಗೂ ಮಹಿಳಾ ಅಭ್ಯರ್ಥಿಗಳು ರೂ 100/– ಶುಲ್ಕ ಮತ್ತು ಇತರೆ ಎಲ್ಲಾ ಅಭ್ಯರ್ಥಿಗಳು ರೂ 200/– ಶುಲ್ಕ ಪಾವತಿಸತಕ್ಕದ್ದು ಎಂದು ತಿದ್ದುಪಡಿ ಮಾಡಲಾಗಿದೆ.

ಪಿ.ಆರ್. 832 ಜಿಲ್ಲಾಧಿಕಾರಿಗಳು, ಬಳ್ಳಾರಿ.

## ಅಧ್ಯಕ್ಷರು, ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ

### ಅಧಿಸೂಚನೆ

**ಸಂ. ವಿಎ/ಇಎಸ್‌ಟಿ/ಸಿಆರ್/37/09–10, ದಿನಾಂಕ: 26ನೇ ಸೆಪ್ಟೆಂಬರ್ 2009**

**ವಿಷಯ:** ದಾವಣಗೆರೆ ಜಿಲ್ಲಾ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಾಧಿಕಾರಿಗಳ ಹುದ್ದೆಯನ್ನು ನೇರ ನೇಮಕಾತಿ ಮೂಲಕ ಭರ್ತಿಮಾಡುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂ. ಕಂಇ 299 ಬಿಎಸ್‌ಸಿ 2006 ದಿ: 8.9.2009

ದಾವಣಗೆರೆ ಜಿಲ್ಲಾ ಕಂದಾಯ ಇಲಾಖಾ ಘಟಕದಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ.

ಅರ್ಹ ಅಭ್ಯರ್ಥಿಗಳು ಭರ್ತಿ ಮಾಡಿದ ನಿಗದಿತ ನಮೂನೆಯಲ್ಲಿ ಎಲ್ಲಾ ವಿವರಗಳೊಂದಿಗೆ **ಅಧ್ಯಕ್ಷರು, ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ** ಇವರಿಗೆ **ದಿನಾಂಕ:30.10.2009 ರಂದು 5.00 ಗಂಟೆಯೊಳಗೆ** ಅಥವಾ ಅದಕ್ಕೂ ಮುಂಚಿತವಾಗಿ ತಲುಪುವಂತೆ ಅಂಚೆ ಅಥವಾ ಕೊರಿಯರ್ ಮೂಲಕ ಮಾತ್ರ ಕಳುಹಿಸುವುದು. ಹುದ್ದೆಗಳ ಸಂಖ್ಯೆಯನ್ನು ಕಡಿಮೆ ಅಥವಾ ಹೆಚ್ಚು ಮಾಡುವುದಕ್ಕೆ ಜಿಲ್ಲಾಧಿಕಾರಿಗಳಿಗೆ ಮಾತ್ರ ಅಧಿಕಾರವಿರುತ್ತದೆ. ಅರ್ಜಿಗಳನ್ನು ಮುದ್ದಾಂ ಸ್ವೀಕರಿಸಲಾಗುವುದಿಲ್ಲ.

**ಹುದ್ದೆಗಳ ವಿವರ**

| ಕ್ರಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವಿದ್ಯಾರ್ಹತೆ | ವೇತನ ಶ್ರೇಣಿ |
|---|---|---|---|---|
| 1 | ಗ್ರಾಮ ಲೆಕ್ಕಿಗ | 42 | ಪಿ.ಯು.ಸಿ. ಅಥವಾ 12ನೇ ತರಗತಿ (ಸಿಬಿಎಸ್‌ಸಿ/ಐಸಿಎಸ್‌ಇ) ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು | 5800–10500 |

**ವರ್ಗೀಕರಣ**

| ಕ್ರಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವರ್ಗೀಕರಣ | | | | | | | | |
|---|---|---|---|---|---|---|---|---|---|---|---|
| | | | | ಇತರೆ | ಮಹಿಳೆ | ಗ್ರಾಮೀಣ | ಅಂ.ವಿ | ಮಾ.ಸೈ. | ಕ.ಮಾ.ಅ. | ಯೋ.ನಿರಾ | **ಒಟ್ಟು** |
| 1 | ಗ್ರಾಮ ಲೆಕ್ಕಿಗ | 42 | ಪ.ಜಾ | 2 | 2 | 2 | 1 | – | – | – | **7** |
| | | | ಪ.ಪಂ. | 1 | 1 | – | – | – | – | – | **2** |
| | | | ಪ್ರ.1 | 1 | 1 | – | – | – | – | – | **2** |
| | | | ಪ್ರ.2(ಎ) | 1 | 2 | 2 | 1 | – | – | – | **6** |
| | | | ಪ್ರ.2(ಬಿ) | 1 | 1 | – | – | – | – | – | **2** |
| | | | ಪ್ರ.3(ಎ) | 1 | – | – | – | – | – | – | **1** |
| | | | ಪ್ರ.3(ಬಿ) | 1 | – | – | – | – | – | – | **1** |
| | | | ಸಾ.ಅ. | 5 | 6 | 5 | 1 | 2 | 1 | 1 | **21** |
| | | | | | | | | | | **ಒಟ್ಟು** | **42** |

1) ಮಾ.ಸೈ – ಮಾಜಿ ಸೈನಿಕರು
2) ಕ.ಮಾ.ಅ– ಕನ್ನಡ ಮಾಧ್ಯಮ ಅಭ್ಯರ್ಥಿ
3) ಯೋ.ನಿರಾ– ಯೋಜನಾ ನಿರಾಶ್ರಿತರು
4) ಅಂ.ವಿ.– ಅಂಗವಿಕಲರು

**ಅಭ್ಯರ್ಥಿಗಳಿಗೆ ಸೂಚನೆ ಮತ್ತು ಷರತ್ತುಗಳು :**

1. **ಅರ್ಜಿಗಳನ್ನು ಅಂಚೆ ಅಥವಾ ಕೊರಿಯರ್ ಮೂಲಕ ಮಾತ್ರ ಕಳುಹಿಸತಕ್ಕದ್ದು. ಖುದ್ದಾಗಿ ಸ್ವೀಕರಿಸಲಾಗುವುದಿಲ್ಲ.**
2. **ವಯೋಮಿತಿ :** ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು ಕೆಳಕಂಡ ವಯೋಮಿತಿ ಹೊಂದಿರತಕ್ಕದ್ದು.

| | | | |
|---|---|---|---|
| ಪ.ಜಾ. / ಪ.ಪಂ., ಪ್ರವರ್ಗ–1 | : | ಕನಿಷ್ಠ –18 | ಗರಿಷ್ಠ–40 |
| ಹಿಂದುಳಿದ ವರ್ಗ | : | ಕನಿಷ್ಠ –18 | ಗರಿಷ್ಠ–38 |
| ಸಾಮಾನ್ಯ ವರ್ಗ | : | ಕನಿಷ್ಠ –18 | ಗರಿಷ್ಠ–35 |

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

ಅ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು

ಆ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

ಇ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು

3. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ.
4. ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿ ಸಲ್ಲಿಸಬೇಕು. ಅರ್ಜಿಯನ್ನು **ಜಿಲ್ಲಾಧಿಕಾರಿಗಳ ಕಚೇರಿಯ ವೆಬ್‌ಸೈಟ್ http://davangere.kar.nic.in ಯಿಂದ Download ಮಾಡಿಕೊಳ್ಳುವುದು.** ಅರ್ಜಿಗಳನ್ನು ಜಿಲ್ಲಾಧಿಕಾರಿಗಳ ಕಚೇರಿಯಿಂದ ಒದಗಿಸಲಾಗುವುದಿಲ್ಲ. ಲಕೋಟೆಯ ಮೇಲೆ ಅರ್ಜಿ ಸಲ್ಲಿಸುವ ಹುದ್ದೆಯ ಹೆಸರು ನಮೂದಿಸಿರಬೇಕು.
5. ನಿಗದಿತ ದಿನಾಂಕದ ನಂತರ ಸಲ್ಲಿಸಿದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.
6. ಸರ್ಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಯನ್ನು ನೇಮಕಾತಿ ಪ್ರಾಧಿಕಾರ / ಇಲಾಖಾ ಮುಖ್ಯಸ್ಥರ ಮುಖಾಂತರ ಅರ್ಜಿಯನ್ನು ಸಲ್ಲಿಸುವುದು
7. ಅಭ್ಯರ್ಥಿಯು ತನ್ನ ಇತ್ತೀಚಿನ ಭಾವಚಿತ್ರವೊಂದನ್ನು ಅರ್ಜಿಯ ಬಲಗಡೆ ಮೇಲ್ಭಾಗದಲ್ಲಿ ಅಂಟಿಸಬೇಕು.
8. ಅಭ್ಯರ್ಥಿಗಳ ಆಯ್ಕೆ ಬಗ್ಗೆ ಪ್ರಚಾರ ಅಥವಾ ಶಿಫಾರಸ್ಸುಗಳನ್ನು ಮಾಡಿದರೆ ಅಂಥವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
9. ಅರ್ಜಿದಾರರೊಡನೆ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.
10. ಜಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು ಮತ್ತು ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
11. ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರಿಯಾದ ಜಿಲ್ಲಾಧಿಕಾರಿಗಳು, ದಾವಣಗೆರೆ ರವರು ಕಾಯ್ದಿರಿಸಿಕೊಂಡಿರುತ್ತಾರೆ.
12. ಪ.ಜಾತಿ / ಪ.ಪಂಗಡ ಮತ್ತು ಪ್ರವರ್ಗ–1 ಅಭ್ಯರ್ಥಿಗಳು ರೂ.50/– ಹಾಗೂ ಇತರರಿಗೆ ರೂ.100/–ಗಳಿಗೆ ಬ್ಯಾಂಕ್ ಡಿ.ಡಿ.ಯನ್ನು **ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ** ಇವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು ಮತ್ತು ಡಿ.ಡಿ.ಗಳನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಮಾತ್ರ ಖರೀದಿಸತಕ್ಕದ್ದು ಹಾಗೂ ಡಿ.ಡಿ.ಯ ಹಿಂದೆ **ಹೆಸರು ಮತ್ತು ವಿಳಾಸವನ್ನು ನಮೂದಿಸತಕ್ಕದ್ದು. ಡಿ.ಡಿ.ಗಳನ್ನು ಲಗತ್ತಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**
13. ಸಹಿ ಮಾಡದಿರುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
14. **ಆಯ್ಕೆಯನ್ನು ಅಭ್ಯರ್ಥಿಯ ಮೆರಿಟ್ ಆಧಾರದ ಮೇಲೆ ಮಾತ್ರ ಪರಿಗಣಿಸಲಾಗುವುದು.**
15. **ಅಂಚೆ ವಿಳಂಬಕ್ಕೆ ಜಿಲ್ಲಾಧಿಕಾರಿಗಳ ಕಚೇರಿ ಜವಾಬ್ದಾರರಾಗುವುದಿಲ್ಲ.**
16. **ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು :**

ಮೀಸಲಾತಿ ಸೌಲಭ್ಯ ಅಪೇಕ್ಷಿಸುವ ಅಭ್ಯರ್ಥಿಗಳು ಈ ಕೆಳಕಂಡ ದಾಖಲೆಗಳ ಪ್ರತಿಗಳನ್ನು ಅರ್ಜಿ ಸಲ್ಲಿಸುವ ದಿನಾಂಕದಂದು ನಿಗದಿತ ನಮೂನೆಯಲ್ಲಿ ಸಂಬಂಧಪಟ್ಟ ರೆವಿನ್ಯೂ ಪ್ರಾಧಿಕಾರದಿಂದ ಪಡೆದು ಲಗತ್ತಿಸಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ನಿಯಮಾನುಸಾರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು.

| | |
|---|---|
| ಪ.ಜಾ / ಪ.ಪಂ.. ಪ್ರವರ್ಗ–1 : | ಸರ್ಕಾರದ ಅಧಿಸೂಚನೆ SWD.132.SAD97 ದಿ:8.2.2000 ಕ್ರಮವಾಗಿ ನಮೂನೆ–1 ಹಾಗೂ 2 |
| ಪ್ರವರ್ಗ2ಎ, 2ಬಿ, 3ಎ, 3ಬಿ : | ಸರ್ಕಾರದ ಅಧಿಸೂಚನೆ SWD 126 BCA ದಿ: 13.12.2003 ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ ತಿದ್ದುಪಡಿ) ನಿಯಮಗಳು 2000ರನ್ವಯ ನಮೂನೆ–3 |

**ಮೀಸಲಾತಿ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರಬೇಕು.**

**17. ಯೋಜನೆ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು :**

ಸರ್ಕಾರಿ ಆದೇಶ ಸಂ. ಸಿಆಸುಇ 71 ಸೇನೆನಿ 2001 ದಿ: 24.10.2002ರನ್ವಯ ಶೇಕಡ 5 ರಷ್ಟು ಹುದ್ದೆಗಳನ್ನು ಯೋಜನಾ ನಿರಾಶ್ರಿತರ ಗುಂಪಿಗೆ ಮೀಸಲಿಡಲಾಗಿದೆ. ಈ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್‌ರವರು ನೀಡಿದ ಪ್ರಮಾಣ ಪತ್ರಗಳನ್ನು ಲಗತ್ತಿಸಬೇಕು.

**18. ಮಾಜಿ ಸೈನಿಕರ ಕುಟುಂಬದ ಅಭ್ಯರ್ಥಿಗಳು:**

ಮಾಜಿ ಸೈನಿಕರು ಎನ್ನುವ ಬಗ್ಗೆ ಅಥವಾ ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುತ್ತಿರುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರು ಎಂಬ ಬಗ್ಗೆ ಸಕ್ಷಮ ಮಿಲಿಟರಿ ಅಧಿಕಾರಿಗಳಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**19. ಅಂಗವಿಕಲ ಕುಟುಂಬದ ಅಭ್ಯರ್ಥಿಗಳು :**

ಅಂಗವಿಕಲ ಅಭ್ಯರ್ಥಿ ಎಂದರೆ, ಸರ್ಕಾರದ ಆದೇಶ ಸಂ.ಡಿಪಿಎಆರ್ 52 ಎಸ್‌ಆರ್‌ಆರ್ 99 ದಿ: 29.11.2002ರಂತೆ

(ಎ) ಕುಷ್ಠರೋಗ ನಿವಾರಿತರು

(ಬಿ) ಶ್ರವಣ ದೋಷ ಉಳ್ಳವರು ಅಂದರೆ 70 ಡೆಸಿಬಲ್ಸ್ ಮತ್ತು ಅದಕ್ಕಿಂತ ಹೆಚ್ಚು

(ಸಿ) ಮೂಳೆಗಳು, ಮಾಂಸಖಂಡಗಳು ಮತ್ತು ಕೀಲುಗಳು ವಾಡಿಕೆಯ ಕಾರ್ಯನಿರ್ವಹಣೆಗೆ ಅಡಚಣೆಯಾಗುವಂತಹ ದೈಹಿಕ ದೋಷ ಅಥವಾ ವಿಕಲತೆ ಹೊಂದಿರುವ ವ್ಯಕ್ತಿಗಳು ಅರ್ಹರಾಗಿರುವುದಿಲ್ಲ.

(ಡಿ) ರಾಜ್ಯದ ಸರ್ಕಾರಿ ಜಿಲ್ಲಾ ಮತ್ತು ತಾಲ್ಲೂಕು ಆಸ್ಪತ್ರೆಗಳಲ್ಲಿರುವ ವೈದ್ಯರು ಅಂಗವಿಕಲರಿಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ನೀಡಲು ಅಧಿಕಾರ ಹೊಂದಿದವರಾಗಿರುತ್ತಾರೆ.

ಸರ್ಕಾರದ ಆದೇಶ ಸಂ. ಡಿಪಿಎಆರ್ 07 ಸೇಸ್ಥಿಅ 94 ದಿನಾಂಕ: 13.9.95 ರಲ್ಲಿ ನಿಗದಿಪಡಿಸಿರುವ ವೈದ್ಯಕೀಯ ಪ್ರಮಾಣ ಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

**20. ಗ್ರಾಮೀಣ ಅಭ್ಯರ್ಥಿಗಳು :**

ಗ್ರಾಮೀಣ ಅಭ್ಯರ್ಥಿ ಎಂದರೆ, ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ದೃಢೀಕೃತ ಗ್ರಾಮೀಣ ಪತ್ರವನ್ನು ಲಗತ್ತಿಸತಕ್ಕದ್ದು. ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ರ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದು ಅದರ ಒಂದೊಂದು ಫೋಟೋ ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2 ಬಿ, 3ಎ, 3 ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2 ರಲ್ಲಿ ನಿಗದಿತ ಪ್ರಾಧಿಕಾರಿಗಳಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲು ರುಜು ಮತ್ತು ಮೊಹರು ಮಾಡಿಸಿಕೊಂಡು ಅದರ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**21. ಕನ್ನಡ ಮಾಧ್ಯಮ ಅಭ್ಯರ್ಥಿಗಳು:**

ಸರ್ಕಾರದ ಅಧಿಸೂಚನೆ ಸಂ. ಡಿಪಿಎಆರ್ 71 ಎಸ್‌ಆರ್‌ಆರ್ 2001 ದಿ: 24.10.2002ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು

1977ರ ನಿಯಮ (9) (1) (ಸಿ) ರನ್ವಯ ಅಭ್ಯರ್ಥಿಯು 1 ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

**22. ಅರ್ಹತಾ ಷರತ್ತುಗಳು :**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನ್ಯತೆಯಿಂದ ಮುಕ್ತರಾಗಿರಬೇಕು.

ಇ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**23. ಕೆಳಕಂಡ ದಾಖಲೆಗಳನ್ನು ಅರ್ಜಿಯ ಜೊತೆಗೆ ಲಗತ್ತಿಸಿದೆಯೇ ಎಂದು ಖಚಿತಪಡಿಸಿಕೊಳ್ಳುವುದು.**

*. ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ / ಪ್ರಮಾಣ ಪತ್ರ ಮತ್ತು ಕಂಪ್ಯೂಟರ್ ಜ್ಞಾನದ ಬಗ್ಗೆ ದಾಖಲೆ

**ಸ್ಥಳೀಯ ಇಬ್ಬರು ಸಾಕ್ಷಿದಾರರು**

ಅಭ್ಯರ್ಥಿಯ ಮತ್ತು ಅವರ ತಂದೆ/ತಾಯಿ/ಪೋಷಕರು/ಪತಿ/ಪತ್ನಿ ಇವರನ್ನು ಹಾಗೂ ಇವರ ಸಹಿಯನ್ನು ಗುರುತಿಸುತ್ತೇವೆ.

ಸಾಕ್ಷಿದಾರರ ಸಹಿ 1)

(ಪೂರ್ಣ ವಿಳಾಸದೊಂದಿಗೆ) 2)

**ಪರಿಶೀಲನಾ ಪ್ರಮಾಣ ಪತ್ರ**

1. ಶ್ರೀ/ಶ್ರೀಮತಿ.................................................................................................. ಎಂಬುವವರ ಮಗ/ಮಗಳು/ಪತಿ/ಪತ್ನಿ/ಶ್ರೀ/ಶ್ರೀಮತಿ/ಕುಮಾರಿ..................................................................... ಎಂಬುವವರು ಕರ್ನಾಟಕ ರಾಜ್ಯದ ................................ ಜಿಲ್ಲೆಯ ವಿಭಾಗ ............................ ಗ್ರಾಮ/ಪಟ್ಟಣ/ನಗರದಲ್ಲಿ ಸಾಮಾನ್ಯ ನಿವಾಸಿಯಾಗಿದ್ದಾರೆ ಮತ್ತು ಇವರು ಜನರಲ್ ಮೆರಿಟ್ ವರ್ಗಕ್ಕೆ ಸೇರಿದವರಾಗಿರುತ್ತಾರೆ.

2. ಶ್ರೀ/ಶ್ರೀಮತಿ/ಕುಮಾರಿ ........................................................ ಇವರ ತಂದೆ/ತಾಯಿ/ಪೋಷಕರು ಸರ್ಕಾರಿ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಡಿ 251 ಬಿಸಿಎ 94, ಬೆಂಗಳೂರು, ದಿನಾಂಕ 31.01.1995 ರನ್ವಯ ಜನರಲ್ ಮೆರಿಟ್ ವರ್ಗದ ಮೇಲುಸ್ತರದಲ್ಲಿ (Creamy Layer) ಬರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ತಹಶೀಲ್ದಾರರು

ದಿನಾಂಕ : ......................... ತಾಲ್ಲೂಕು

ಕಛೇರಿಯ ಮೊಹರು

**ನಮೂನೆ – 2**

**ಗ್ರಾಮೀಣ ಅಭ್ಯರ್ಥಿ ಪ್ರಮಾಣ ಪತ್ರ**

ಶ್ರೀ / ಶ್ರೀಮತಿ ................................................................................................ ರವರ ಮಗ/ಮಗಳು/ಪತ್ನಿ/ಶ್ರೀ/ಶ್ರೀಮತಿ/ಕುಮಾರಿ ............................................ ಜಿಲ್ಲೆ ............................ ತಾಲ್ಲೂಕು ............................ ಗ್ರಾಮದಲ್ಲಿ .......................... ವಾಸವಾಗಿರುವ ಇವರು ಒಂದನೇ ತರಗತಿಯಿಂದ ................................ ತರಗತಿಯವರೆಗೆ ...................................... ಜಿಲ್ಲೆ ................................. ತಾಲ್ಲೂಕು .............................. ಪಟ್ಟಣ ............................................... ಶಾಲೆಯಲ್ಲಿ ವ್ಯಾಸಂಗ ಮಾಡಿ ................................. ವರ್ಷ ನಡೆದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಈ ಶಾಲೆಯು ಅಭ್ಯರ್ಥಿಯು ವ್ಯಾಸಂಗ ಮಾಡಿದ ಅವಧಿಯಲ್ಲಿ ಕರ್ನಾಟಕದ ಪೌರ ನಿಗಮಗಳ ಅಧಿನಿಯಮ, 1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟ ಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶಗಳ ಹೊರತಾದ ಪ್ರದೇಶದಲ್ಲಿತ್ತು.

ಮೇಲುರುಜು ಮುಖ್ಯೋಪಾಧ್ಯಾಯರ ಸಹಿ

ಕ್ಷೇತ್ರ ಶಿಕ್ಷಣಾಧಿಕಾರಿ ಮತ್ತು ಸಂಸ್ಥೆಯ ಮೊಹರು

ಕಛೇರಿಯ ಮೊಹರು

**ಅನುಬಂಧ–5**

**ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ**

ಶ್ರೀ / ಶ್ರೀಮತಿ .............................................................................................................. ರವರ ಮಗ/ಮಗಳು/ಪತ್ನಿ/ಶ್ರೀ/ಶ್ರೀಮತಿ/ ಕುಮಾರಿ ................................................ ಜಿಲ್ಲೆ ............................. ತಾಲ್ಲೂಕು ............................... ಗ್ರಾಮದಲ್ಲಿ ...................... ವಾಸವಾಗಿರುವ ಇವರು .................................... ನೇ ತರಗತಿಯಿಂದ ............................................ ನೇ ತರಗತಿಯವರೆಗೆ ............................. ಶೈಕ್ಷಣಿಕ ವರ್ಷದಿಂದ ............................. ಶೈಕ್ಷಣಿಕ ವರ್ಷದವರೆಗೆ.............................. ಶಾಲೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ದಿನಾಂಕ : ಮುಖ್ಯೋಪಾಧ್ಯಾಯರ ಸಹಿ ಮತ್ತು ಸಂಸ್ಥೆಯ ಮೊಹರು

ಸ್ಥಳ :

**ಸೂಚನೆ:** ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಶಾಲೆಗಳಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಶಾಲಾವಾರು ಪ್ರತ್ಯೇಕ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ ಸಲ್ಲಿಸಬೇಕು.

**ಅನುಬಂಧ–6**

**ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 44 ಸೆನೆನಿ 2001 ದಿನಾಂಕ 27–07–2001**

**ನಮೂನೆ–3**

**ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿ**

**ಪ್ರಮಾಣ ಪತ್ರ**

ಶ್ರೀ/ಶ್ರೀಮತಿ ........................................................................................................ ಎಂಬುವವರ ಮಗ/ಮಗಳು/ಪತ್ನಿ/ಶ್ರೀ/ಶ್ರೀಮತಿ/ ಕುಮಾರಿ ................................................... ಜಿಲ್ಲೆ ............................. ತಾಲ್ಲೂಕು ............................. ಗ್ರಾಮದಲ್ಲಿ

..................ವಾಸವಾಗಿರುವ ಇವರು : ಇವರ ಕುಟುಂಬದವರು ಅವಲಂಬಿತರಾಗಿದ್ದ ಈ ಕೆಳಕಂಡ ಆಸ್ತಿಯನ್ನು ............................................................ ಯೋಜನೆಗಾಗಿ .............................. ಇಸವಿ.................ಯಂದು ಸ್ವಾಧೀನಪಡಿಸಿಕೊಳ್ಳಲಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸಿದೆ :–

(i) ** ವಾಸಿಸುವ ಮನೆ ಮತ್ತು ತಾವು ಅವಲಂಬಿತರಾಗಿದ್ದ ಅವರ ಕೃಷಿ ಭೂಮಿಯ ಅರ್ಧದಷ್ಟು.

(ii) ** ಯೋಜನೆಗೆ ಮೊದಲು ಭೂಮಿಯನ್ನು ಹೊಂದಿರದೆ : ಯೋಜನೆಯಿಂದ ತಾವು ವಾಸಿಸುವ ಮನೆ :

(iii) ** ತಾವು ಅವಲಂಬಿತರಾಗಿದ್ದ ತಮ್ಮ ಕೃಷಿ ಭೂಮಿಯ ಅರ್ಧದಷ್ಟು ಅಥವಾ ಅದಕ್ಕಿಂತ ಕಡಿಮೆ ಕೃಷಿ ಭೂಮಿ :

(iv) ** ಇತರ ಇನ್ನಾವುದೇ ಪ್ರಕರಣದಲ್ಲಿ ಯೋಜನೆಯಿಂದ ನಿರ್ವಸಿತರಾದವರು.

ತಹಶೀಲ್ದಾರರು
......................... ತಾಲ್ಲೂಕು

(** ಅನ್ವಯವಾಗುವ ಐಟಂನ್ನು ಮಾತ್ರ ಪ್ರಮಾಣ ಪತ್ರದಲ್ಲಿ ನಮೂದಿಸತಕ್ಕದ್ದು.)

## ಅನುಬಂಧ–7

## ರಾಜ್ಯ ಸರ್ಕಾರಿ/ಕೇಂದ್ರ ಸರ್ಕಾರಿ ನೌಕರರು ಒದಗಿಸಬೇಕಾದ ಪ್ರಮಾಣ ಪತ್ರ

ಶ್ರೀ/ಶ್ರೀಮತಿ.................................................................................. ರವರು ರಾಜ್ಯ/ಕೇಂದ್ರ ಸರ್ಕಾರದಲ್ಲಿ............................... (ಪದನಾಮ)........................................... ಇಲಾಖೆಯಲ್ಲಿ ಖಾಯಂ/ತಾತ್ಕಾಲಿಕ ಹುದ್ದೆಯನ್ನು ದಿನಾಂಕ: ....................... ರವರೆಗೆ ಹೊಂದಿರುವರು. ಈ ಹುದ್ದೆಗೆ ಇವರು ನೇಮಕಾತಿ ನಿಯಮಗಳಡಿ ಆಯ್ಕೆಯಾಗಿದ್ದು, ಸದರಿ ಹುದ್ದೆಗೆ ಅರ್ಜಿ ಸಲ್ಲಿಸಲು ಅವರಿಗೆ ಅನುಮತಿ ನೀಡಲಾಗಿದೆ.

ಸ್ಥಳ:
ದಿನಾಂಕ:

ನೇಮಕಾತಿ ಪ್ರಾಧಿಕಾರದ ಸಹಿ
(ಇಲಾಖೆ, ಹೆಸರು ಮತ್ತು ಮೊಹರಿನೊಂದಿಗೆ)

**Certificate to be furnished by the State/Central Government Servant**

Certified that Sri/Smt...........................................holds a permanent/temporary post under the State/Central Government as.................................................. (Designation) in the department of.............from.............. having been appointed there in under the rules of recruitment. He/She is permitted to apply for the said post.

Signature of the Authority
(Authority of the Department with Name & Seal)

## ಅನುಬಂಧ–8

## ಕರ್ನಾಟಕ ಸರ್ಕಾರ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೆನನಿ 2005, ದಿನಾಂಕ: 19.11.2005.

## CERTIFICATE FOR THE PERSONS WITH DISABILITIES

This is to certify that Sri/Smt/Kum........................................................................................ Son/wife/daughter of Sri .............................................................. Age ................. old, male/ female. Registration No. ......................................... is a case of .............................................................. He/She is physically disabled/visual disabled /speech & hearing disabled and has ...........% (..................percent) permanent (Physical impairment/visual impairment speech and hearing impairment) in relation to his/her...........................................

**Note:**

1. This condition is progressive/non-progressive/likely to improve/not likely to improve*
2. Re-assessment is not recommended/is recommended after a period of .....................months/ years.*

* Strike out which is not applicable.

| | | | |
|---|---|---|---|
| (Recent Attested Photograph showing the disability Affixed here) | Sd/- (Doctor) (Seal) | Sd/- (Doctor) (Seal) | Sd/- (Doctor) (Seal) |

Countersigned by the Medical Superintendent CMO/Head of Hospital (with seal)

Signature/Thumb impression of the disabled person.

P.R. 830

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

### ಜಿಲ್ಲಾ ನೋಂದಣಾಧಿಕಾರಿಗಳು, ಕೋಲಾರ ಇವರ ನಡವಳಿಗಳು

### ನೇಮಕಾತಿ ಆದೇಶ

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕೋಲಾರ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:**
1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ:ಸಿಬ್ಬಂದಿ 65/2001–02, ದಿನಾಂಕ: 26.12.2001.
2. ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:13:ಎಸ್‌ಬಿಸಿ:2001 ದಿನಾಂಕ:21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು, 2001.
3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ:EST:1–273/01–02, ದಿನಾಂಕ:01.08.2002 (ದಿನಾಂಕ:8.8.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ.)
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ: EST:1-273/2001-02, ದಿನಾಂಕ: 23.11.2004.
5. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ರೀ–ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST:1-273/2001-02, ದಿನಾಂಕ: 28.08.2009.
6. ಸರ್ಕಾರದ ಆದೇಶ ಸಂಖ್ಯೆ: FD (SPL) 04 PET 2005 ದಿನಾಂಕ: 31.3.2006.

**ಪ್ರಸ್ತಾವನೆ:**

ಈ ಇಲಾಖೆಯ ಕೋಲಾರ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1)ರನ್ವಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ. ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಕೋಲಾರ ಜಿಲ್ಲೆ | ಒಂದು | ಇಲ್ಲ | ಒಂದು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಮತ್ತು ಮೀಸಲಾತಿ ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (4)ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿರುತ್ತಾರೆ.

ತದನಂತರ ಈ ಜಿಲ್ಲೆಯಲ್ಲಿ ಮೇಲ್ಕಂಡಂತೆ ಗುರುತಿಸಲ್ಪಟ್ಟ ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳಲು ಕೆಳಕಂಡ ಮೂರು ಬ್ಯಾಕ್‌ಲಾಗ್ ಅಭ್ಯರ್ಥಿಗಳನ್ನು ಒಬ್ಬರಾದ ನಂತರ ಒಬ್ಬರಂತೆ ಕ್ರಮವಾಗಿ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಈ ಜಿಲ್ಲೆಗೆ ನೇಮಕಾತಿಗಾಗಿ ಅಲಾಟ್ ಮಾಡಿದ್ದರ ಮೇರೆ ಕೆಳಕಂಡ ಈ ಮೂರು ಅಭ್ಯರ್ಥಿಗಳನ್ನು ಒಬ್ಬರಾದ ನಂತರ ಒಬ್ಬರಂತೆ ಕ್ರಮವಾಗಿ ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿದಾಗ್ಯೂ ಸಹ ಸದರಿ ಅಭ್ಯರ್ಥಿಗಳು ದ್ವಿತೀಯ ದರ್ಜೆ ಸಹಾಯಕರಾಗಿ ಕೆಲಸಕ್ಕೆ ಹಾಜರಾಗದೇ ಇದ್ದ ಕಾರಣ ಇವರುಗಳಿಗೆ ಕ್ರಮವಾಗಿ ನೀಡಿದ ಮೂರು ನೇಮಕಾತಿ ಆದೇಶಗಳನ್ನು ನಿಯಮಾನುಸಾರ ಕ್ರಮವಾಗಿ ರದ್ದುಪಡಿಸಲಾಯಿತು. ಹಾಗೂ ಈ ವಿಷಯವನ್ನು ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕ ಆಯುಕ್ತರು ಬೆಂಗಳೂರು ಇವರಿಗೂ ಹಾಗೂ ಸದರಿ ಅಭ್ಯರ್ಥಿಗಳಿಗೂ ತಿಳಿಸಲಾಯಿತು.

| | | |
|---|---|---|
| 1 | ಕೆ.ಎನ್. ನಾರಾಯಣಸ್ವಾಮಿ, ಕೋಲಾರ ತಾ: | ಪರಿಶಿಷ್ಟ ಜಾತಿ ಸಾಮಾನ್ಯ ಅಭ್ಯರ್ಥಿ ಮುಖ್ಯ ಪಟ್ಟಿ |
| 2 | ಪ್ರಿಯರಂಜನ್ ಜಿ.ಎಸ್. ಮೈಸೂರು–23 | ಪರಿಶಿಷ್ಟ ಜಾತಿ ಸಾಮಾನ್ಯ ಅಭ್ಯರ್ಥಿ ಹೆಚ್ಚುವರಿ ಪಟ್ಟಿ |
| 3 | ಶ್ರೀ ಮಂಜುನಾಥ ನಾಗರಾಜ, ಭದ್ರಾವತಿ | ಪರಿಶಿಷ್ಟ ಜಾತಿ ಸಾಮಾನ್ಯ ಅಭ್ಯರ್ಥಿ ಹೆಚ್ಚುವರಿ ಪಟ್ಟಿ |

ಈ ರೀತಿ ಮೇಲ್ಕಂಡ ಮೂರು ಬ್ಯಾಕ್‌ಲಾಗ್ ಅಭ್ಯರ್ಥಿಗಳು ಈ ಜಿಲ್ಲೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಕೆಲಸಕ್ಕೆ ಹಾಜರಾಗದೇ ಇದ್ದ ಕಾರಣ ಹಾಗೂ ಸದರಿ ಅಭ್ಯರ್ಥಿಗಳು ತಮ್ಮ ನೇಮಕಾತಿ ಹಕ್ಕನ್ನು ಕಳೆದುಕೊಂಡ ಕಾರಣ, ಮೇಲ್ಕಂಡ

ಸದರಿ ಮಂಜುನಾಥ ನಾಗರಾಜ ಎಂಬ ಅಭ್ಯರ್ಥಿಯ ಬದಲಿಗೆ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ರೀ–ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ನೇಮಕಾತಿಗಾಗಿ ಅಲಾಟ್ ಮಾಡಿ ಈ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಅಭ್ಯರ್ಥಿಯನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ:ಸಿಬ್ಬಂದಿ. 55/2004–05, ದಿನಾಂಕ: 15ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (5)ರಲ್ಲಿನ ರೀ–ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 5800–100–6000–125–6500–150–7100–175–7800–200–8600–225–9500–250–10500 ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಜನ್ಮ ದಿನಾಂಕ | 7.9.2002 ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ–ತಿಂ–ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | ತಾರಾಸಿಂಗ್ ಚಾಜು ಚವಾಣ್ S/o ಚಾಜು ಚವಾಣ್, ಮೊಕ್ಕಾಂ ಪೋಸ್ಟ್, ಹಿಟ್ಟನಹಳ್ಳಿ (LT) ಸಿಂದಗಿ ತಾಲ್ಲೂಕು, ಬಿಜಾಪುರ ಜಿಲ್ಲೆ–586215 | SC | 10.06.1972 | 30.02.27 | SSLC:73.833 | ಉಪ ನೋಂದಣಿ ಕಛೇರಿ, ಮುಳಬಾಗಿಲು, ಕೋಲಾರ ಜಿಲ್ಲೆ. | ಪರಿಶಿಷ್ಟ ಜಾತಿ ಸಾಮಾನ್ಯ ಅಭ್ಯರ್ಥಿ ಹೆಚ್ಚುವರಿ ಪಟ್ಟಿ |

S.S.L.C. ಅಂಕಪಟ್ಟಿಯ ನೋಂದಣಿ ಸಂಖ್ಯೆ: F.157102/ಏಪ್ರಿಲ್ 1989ರ ಪ್ರಕಾರ ಸದರಿ ಅಭ್ಯರ್ಥಿಯ ಜನ್ಮ ದಿನಾಂಕವು 10.06.1972 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು, ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್ ಮತ್ತು ಕೆ.ಸಿ.ಎಸ್ (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್ (ಸಿ.ಸಿ.ಎ) ನಿಯಮಗಳು 1957ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವೆ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್ (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ಅಭ್ಯರ್ಥಿಯು ತಮ್ಮ Pass Port Size ನ ಎರಡು ಇತ್ತೀಚಿನ ಫೋಟೋಗಳನ್ನು ತಾವು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿನ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಅಂಕಪಟ್ಟಿಯನ್ನು ಮತ್ತು ಪ್ರಮಾಣ ಪತ್ರಗಳನ್ನು ಹಾಗೂ SSLC ಮೂಲ ಅಂಕಪಟ್ಟಿಯನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

9. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಮತ್ತು ಶಾಲೆಯಿಂದ ನೀಡಿದ ಮೂಲ TC ಯನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
10. ಭಾರತದ ಸಂವಿಧಾನಕ್ಕೆ ಬದ್ದರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.
11. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
13. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ, ಒಬ್ಬರೆ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್ (ನಡತೆ) ನಿಯಮಗಳು, 1966ರಲ್ಲಿನ ನಿಯಮ 28ರ ರೀತ್ಯ ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿರುವ ಘೋಷಣಾ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರ್‌ಪಡಿಸತಕ್ಕದ್ದು.
14. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/– ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ–1 ಅನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೆ ರದ್ದುಪಡಿಸಲಾಗುವುದು.
18. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
19. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
20. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
21. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ Establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಕಾರಣ ನೀಡದೇ ಅಥವಾ ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಪಡಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/– ರೂ. ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ–2 ಅನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.
22. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.
23. ಸರ್ಕಾರದವರು ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಗೆ ಬದಲಾಗಿ ದಿನಾಂಕ: 01.04.2006 ರಿಂದ ಜಾರಿಗೆ ಬರುವಂತೆ ಉಲ್ಲೇಖ (6)ರ ಸರ್ಕಾರದ ಆದೇಶದಲ್ಲಿ ಹೊಸದಾಗಿ New Defined contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ: 01.04.2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆ ಎಂದು ಆದೇಶ ಮಾಡಿರುತ್ತಾರೆ. ಆದ್ದರಿಂದ ಈ ಜಿಲ್ಲೆಯಲ್ಲಿ ನೇಮಕ ಹೊಂದಿದ ಸದರಿ ನೌಕರರು ಸರ್ಕಾರದ ಉಲ್ಲೇಖ (6)ರ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ಉಲ್ಲೇಖ (6)ರ ಆದೇಶದಲ್ಲಿನ ನಿರ್ದೇಶನಕ್ಕೆ ಸದರಿ ನೌಕರರು ಬದ್ಧರಾಗಿರತಕ್ಕದ್ದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 798

**ಹಿರಿಯ ಸಹಾಯಕ ತೋಟಗಾರಿಕಾ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್, ಕೋಲಾರ**

**ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ : 01/2009–10, ದಿನಾಂಕ: 3ನೇ ಅಕ್ಟೋಬರ್ 2009**

ಕರ್ನಾಟಕ ರಾಜ್ಯದ ರಾಜ್ಯಪಾಲರ ಪರವಾಗಿ ಕೋಲಾರ ತಾಲ್ಲೂಕು ಪಂಚಾಯತ್‌ನ ತೋಟಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡ ಕಸಿ/ಸಸಿಗಳನ್ನು ಸರಬರಾಜು ಮಾಡಲು ದ್ವಿ ಲಕೋಟೆಯಲ್ಲಿ ಟೆಂಡರನ್ನು ಆಹ್ವಾನಿಸಲಾಗಿದೆ.

| | | |
|---|---|---|
| 1. | ಅರ್ಜಿಯನ್ನು ಸ್ವೀಕರಿಸುವ ದಿನಾಂಕ | 03.10.2009 ರಿಂದ 20.10.2009 ಸಾಯಂಕಾಲ 4.30 ಗಂಟೆಯವರೆಗೆ |
| 2. | ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ | 03.10.2009 ರಿಂದ 20.10.2009 ಸಾಯಂಕಾಲ 4.30 ಗಂಟೆಯವರೆಗೆ |
| 3. | ಟೆಂಡರ್ ಫಾರಂಗಳ ಶುಲ್ಕ | ರೂ.500=00 |
| 4. | ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಕಛೇರಿಗೆ ಸಲ್ಲಿಸುವ ದಿನಾಂಕ | 22.10.2009 ಸಾಯಂಕಾಲ 4.00 ಗಂಟೆಯವರೆಗೆ |
| 5. | ತಾಂತ್ರಿಕ ಟೆಂಡರ್ ತೆರೆಯುವ ದಿನಾಂಕ ಮತ್ತು ವೇಳೆ | 23.10.2009 ಬೆಳಿಗ್ಗೆ 11.30 ಗಂಟೆಗೆ |
| 6. | ಆರ್ಥಿಕ ಟೆಂಡರ್ ತೆರೆಯುವ ದಿನಾಂಕ ಮತ್ತು ವೇಳೆ | 23.10.2009 ಸಾಯಂಕಾಲ 4.30 ಗಂಟೆಗೆ |
| 7. | ಟೆಂಡರ್ ತೆರೆಯುವ ವಿಳಾಸ | ಹಿರಿಯ ಸಹಾಯಕ ತೋಟಗಾರಿಕಾ ನಿರ್ದೇಶಕರು (ಜಿಲ್ಲಾ ಪಂಚಾಯತ್), ಕೋಲಾರ. |

ಒಂದು ವೇಳೆ ಮೇಲೆ ಸೂಚಿಸಲಾಗಿರುವ ದಿನಗಳು ಸಾರ್ವಜನಿಕ ರಜಾದಿನಗಳನ್ನಾಗಿ ಘೋಷಿಸಲ್ಪಟ್ಟರೆ ಮುಂದಿನ ದಿನಗಳನ್ನು ಪರಿಗಣಿಸಲಾಗುವುದು.

| ಕ್ರ. ಸಂ. | ಸರಬರಾಜು ಮಾಡಬೇಕಾದ ಕಸಿ/ಸಸಿಗಳ ವಿವರಗಳು | ಟೆಂಡರ್‌ಗೆ ಇಟ್ಟಿರುವ ಅಂದಾಜು ಮೊತ್ತ (ಲಕ್ಷ ರೂ.ಗಳಲ್ಲಿ) | ಇ.ಎಂ.ಡಿ. ಮೊತ್ತ (ರೂ) | ಷರಾ |
|---|---|---|---|---|
| 1. | ಮಾವು ಕಸಿ, ಸಪೋಟ ಕಸಿ, ಮತ್ತು ತೆಂಗು ಸಸಿಗಳ ಸರಬರಾಜು | 20.70 | 50,000/– | ಟೆಂಡರ್ ಫಾರಂಗಳನ್ನು ಹಿರಿಯ ಸಹಾಯಕ ತೋಟಗಾರಿಕಾ ನಿರ್ದೇಶಕರು (ಜಿಲ್ಲಾ ಪಂಚಾಯತ್) ಕೋಲಾರರವರ ಕಛೇರಿಯಲ್ಲಿ ಪಡೆಯಬಹುದು. |

ಹೆಚ್ಚಿನ ವಿವರಗಳಿಗೆ ಹಾಗೂ ಷರತ್ತುಗಳಿಗೆ ಹಿರಿಯ ಸಹಾಯಕ ತೋಟಗಾರಿಕಾ ನಿರ್ದೇಶಕರು (ಜಿ.ಪಂ.) ಕೋಲಾರ ರವರ ಕಛೇರಿಯಲ್ಲಿ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕಾ ನಿರ್ದೇಶಕರು,
(ಜಿಲ್ಲಾ ಪಂಚಾಯತ್), ಕೋಲಾರ

ಪಿ.ಡಿ. 118

**WATER RESOURCES DEPARTMENT (Minor Irrigation)**

**Office of the Executive Engineer M.I. Division, Belgaum**

**Tender Invitation (Two cover system)**

**(Standard Tender Document K/W 4)**

**No.EE/MID/BGM/JE/TND/2009- 10/3229, Dated: 26th September 2009**

1. The Executive Engineer, Minor Irrigation Division Belgaum invites item rate tender from eligible tenderers Registered in KPWD for the works below in two cover system in duplicate as per the Karnataka transparency in Public Procurement Ordinance act 2000 & standard Tender document. The tenderer are advised to note the minimum qualification criteria specified in K/W-4 clause (3) of the Instructions to tenderers to qualify for award of the contract.
2. Two cover bid system of tenders consist of cover-I i.e., Technical Bid & cover-II Financial Bid, Technical Bid opened first, and eligibility of tenderers evaluated on the criteria prescribed then, The Financial Bid of eligible tenderers only will be opened and evaluated. The decision of the competent authority is the final in this regard.
3. Printed contract documents relating to work consisting of the complete set of drawings, specifications of the work to be done, the schedule of quantities, set of conditions of contract to be complied which can be purchased from the office of the Executive Engineer Minor Irrigation Division Belgaum by

submitting the written application along with a Photostat copy of registration certificate, within office hours on all working days on or before the due date along with cost of tender document.

4. The applicant who wish to get the Blank tender document by post shall submit self addressed 350 mm x 245 mm sized envelope along with Rs.300/- Indian postage stamps. Any delay in transit will be at the risk of the applicant.
5. The intending contractors are requested to note that, they should abide by the details instructions & conditions contained in the standard Tender document K/W-4 purchased by them, particulars regarding the amount and validity period of Earnest Money Deposit, Tender validity period, procedure to be followed by the contractor in submitting the tender & in completing the tender documents, correction paras discrepancies, Security Deposit, payable by the successful tender etc., are also available in Tender document.
6. Further information & clarification may be obtained from this office during office hours, if the office happens to be closed on the date as specified next working day will be considered and during the pre-tender meeting.
7. The sealed completed tenders will be received in the Office of the Chief Engineer, M.I.(N) Zone Bijapur, Superintending Engineer, M.I.Circle Belgaum & Executive Engineer Minor Irrigation Division Belgaum on the prescribed date & time.
8. Other details can be seen in the Standard Tender Documents (K/W-4) .

| Sl. No. | Name of work | Approximate value of work (Rs. In lakhs) | Earnest Money Deposit (Rs.) | Cost of document (Rs.) | Period of completion (including monsoon) |
|---|---|---|---|---|---|
| 1 | Construction of LIS near Boragaon Village in Chikkodi Tq. Belgaum Dist. | 435.27 | 6.53000/- | 25000.00+ Tax | 18 months (including monsoon) |

**1.** Date of Sale of Tender documents On Application (During Office hours):
**From : 09/11/2009 to 13/11/2009**

**(Each Tenderer further demonstrate as given in conditions Sl.No.8(iv) : (a) availability by owning as least 50% of the required/ specified key and critical equipment for this work and (b) the remaining 50% can be deployed on lease/ hire basis for all works provided, the relevant documents (commitment, agreements etc.) for availability for this work are to be furnished with the Tender application) failing which such applications will be not be accepted.**

2. Date of Pre-tender meeting : 23-11-09 (In the office of the Executive Engineer, M.I. Division, Belgaum at 11.00 AM
3. Date of receipt of tender document Dt : 08/12/2009 (Up to 16-00 hrs)
4. Date of opening of Technical Bid: Dt.10-12-2009 at 16.00 hrs (if possible)
5. Date of opening of Financial Bid : Shall be Intimated later.

**9. Conditions**

1) The contractor while applying for blank tender forms should submit contractor Registration certificate copy.
2) The earnest money deposit shall be in favour of Executive Engineer, M.I. Division Belgaum and may be in the form of Banker's cheque/DD/Pay order/ payable at Belgaum or Cash or Specified small savings instruments pledged to Executive Engineer M.I.Division Belgaum.
3) The contractor should produce Original Registration pass book while receiving blank tender forms.
4) The validity of EMD shall be for a period 135 days from the last date of receipt of the tender.

5) Security deposit should be paid 5% before Agreement (For approved tender amount)

10. The applicant should have the Eligibility criteria as per section-3 of KW-4 & Note that

i) Each Tenderer should demonstrate: (a) availability by owning at least 50% of the required/ specified key and critical equipment for this work and (b) the remaining 50% can be deployed on lease/ hire basis for all works provided, the relevant documents (commitment, agreements etc.) for availability for this work are furnished.(to be furnisghed along with the Application Form)

| | | |
|---|---|---|
| ❖ | Excavator | 1 No. |
| ❖ | Lorry/Tipper | 2 Nos. |
| ❖ | C.C.Mixer with Hopper | 3 Nos |
| ❖ | Vibrator | 4 Nos. |
| ❖ | Dewatering pump | 4 Nos. |
| ❖ | Centering Materials | Sufficient for 100 Cum Per day |
| ❖ | Crane for Pipe Laying | 1 No. |

11 . All the documents enclosed in support of Technical bid shall be attested by Notary or Gazetted officer. (Not below the rank of Executive Engineer,)

12. Application will not be accepted/ Tender forms will not issued to the contractor who have not participated in the tender after purchase of tender documents continuously for 3 times.

13. The right to accept or reject any or all the tenders without assigning any reasons rates is with the competent authority

14. Conditional tenders will not be considered.

**V.B. KULKARNI**

Executive Engineer, M.I.Division, Belgaum.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಇಂಜಿನೀಯರರ ಕಚೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.**

**ಕ್ರ.ಸಂ.ಸನೀವಿ.ಬೆಳಗಾವಿ/ಕಿ.ಇಂ./ಟೆಂಡರ್/2009–10/3229, ದಿನಾಂಕ: 26ನೇ ಸೆಪ್ಟೆಂಬರ್ 2009**

**ಟೆಂಡರ್ ಪ್ರಕಟಣೆ (ದ್ವಿ ಲಕೋಟೆ ಪದ್ದತಿ)**

**(ಸ್ಟ್ಯಾಂಡರ್ಡ್ ಟೆಂಡರ್ ಡ್ಯಾಕ್ಯೂಮೆಂಟ್ ಪದ್ದತಿ ಕೆ/ಡಬ್ಲ್ಯೂ 4)**

1) ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಅರ್ಹ ಗುತ್ತಿಗೆದಾರರಿಂದ ಈ ಕೆಳಕಂಡ ಕಾಮಗಾರಿಗಳಿಗೆ ಐಟಂ ರೇಟ್ ಟೆಂಡರ್‌ನ್ನು ದ್ವಿ ಲಕೋಟೆ ಪದ್ದತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 2000 ಹಾಗೂ ಸ್ಟ್ಯಾಂಡರ್ಡ್ ಟೆಂಡರ್ ಡ್ಯಾಕ್ಯುಮೆಂಟ್ ಪ್ರಕಾರ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರಿಂದ ಆಹ್ವಾನಿಸಲಾಗಿದೆ. ಗುತ್ತಿಗೆ ಪಡೆಯಲು ಕನಿಷ್ಠ ಅವಶ್ಯಕ ಅರ್ಹತೆಗಳಿಗಾಗಿ ಕೆ/ಡಬ್ಲ್ಯೂ–4 ಗುತ್ತಿಗೆದಾರರ ಸೂಚನೆಗಳಲ್ಲಿನ ಕಲಂ (3) ನ್ನು ಸೂಕ್ಷ್ಮವಾಗಿ ಗಮನಿಸುವಂತೆ ಗುತ್ತಿಗೆದಾರರಿಗೆ ಸೂಚಿಸಲಾಗಿದೆ.

2) ದ್ವಿ ಲಕೋಟೆಗಳಲ್ಲಿ ಒಂದು ತಾಂತ್ರಿಕ ಬಿಡ್ ಎರಡನೆಯದು ಆರ್ಥಿಕ ಬಿಡ್ ಆಗಿರುತ್ತದೆ. ತಾಂತ್ರಿಕ ಬಿಡ್ ಅನ್ನು ಪ್ರಥಮ ಹಂತದಲ್ಲಿ ತೆರೆಯಲಾಗುವುದು ತದನಂತರ ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಪಡೆದ ಗುತ್ತಿಗೆದಾರರ ಆರ್ಥಿಕ ಬಿಡ್‌ನ್ನು ಮಾತ್ರ ತೆರೆದು ವಿಶ್ಲೇಷಿಸಲಾಗುವುದು. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

3) ಕಾಮಗಾರಿಗೆ ಸಂಬಂಧಿಸಿದ ಐಟಂವಾರು ಪರಿಮಾಣ, ಗುತ್ತಿಗೆಯ ಪತ್ರಗಳು, ಕರಾರುಗಳು, ಕೈಕೊಳ್ಳಬೇಕಾದ ಕಾಮಗಾರಿಯ ವಿವರ, ಹಾಗೂ ನಕ್ಷೆಗಳು ಇತ್ಯಾದಿಗಳನ್ನೊಳಗೊಂಡ ಮುದ್ರಿತ ಟೆಂಡರ್ ಪುಸ್ತಕಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರಿಂದ ಕಚೇರಿ ವೇಳೆಯಲ್ಲಿ ಲಿಖಿತ ಅರ್ಜಿ ಸಲ್ಲಿಸಿ, ಗುತ್ತಿಗೆದಾರರೆಂದು ನೋಂದಾಯಿಸಿದ ಬಗೆಗಿನ ಪ್ರಮಾಣ ಪತ್ರದ ಪ್ರತಿ ಹಾಗೂ ನಿಗದಿತ ಶುಲ್ಕವನ್ನು ಸಂದಾಯ ಮಾಡಿ ಖರೀದಿಸಬಹುದು.

4) ಖಾಲಿ ಟೆಂಡರ್ ಪುಸ್ತಕಗಳಿಗಾಗಿ ಅರ್ಜಿಯನ್ನು ಅಂಚೆ ಮೂಲಕ ಸಲ್ಲಿಸುವವರು ನಿಗದಿತ ಶುಲ್ಕವನ್ನು ರಾಷ್ಟ್ರೀಕೃತ/ಶೆಡ್ಯೂಲ್ಡ್ ಭಾರತೀಯ ಬ್ಯಾಂಕಿನಿಂದ ಪಡೆದ ಡಿ.ಡಿ.ಮುಖಾಂತರ ಗುತ್ತಿಗೆದಾರರೆಂದು ನೋಂದಾಯಿಸಿದ ಬಗೆಗಿನ ಪ್ರಮಾಣ ಪತ್ರದ ಪ್ರತಿಯೊಂದಿಗೆ ಸಲ್ಲಿಸಬಹುದಾಗಿದೆ. ಟೆಂಡರ್ ಪುಸ್ತಕಗಳನ್ನು ಅಂಚೆ ಮೂಲಕ ಪಡೆಯಲಿಚ್ಛಿಸುವ ಗುತ್ತಿಗೆದಾರರು

ಅರ್ಜಿಯ ಜೊತೆಗೆ ಸ್ವವಿಳಾಸವಿರುವ 350 ಎಂಎಂ X 245 ಎಂ.ಎಂ. ಅಳತೆಗೂ ಕಡಿಮೆ ಇಲ್ಲದ ರೂ.300.00ಗಳ ಅಂಚೆ ಚೀಟಿ ಅಂಟಿಸಿದ ಲಕೋಟೆಯನ್ನು ಸಲ್ಲಿಸಬೇಕು. ಅಂಚೆಯಲ್ಲಿ ಅಥವಾ ಕೊರಿಯರ್‌ನಲ್ಲಿ ಯಾವುದೇ ತರಹದ ವಿಳಂಬವಾದಲ್ಲಿ ಅದಕ್ಕೆ ಈ ಕಚೇರಿಯು ಜವಾಬ್ದಾರಿಯಿಲ್ಲವೆಂದು ತಿಳಿಯಪಡಿಸಲಾಗಿದೆ.

5) ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ತಾವು ಖರೀದಿಸಲು ಇಚ್ಚಿಸಿದ ಕಾಮಗಾರಿಗಳ ಟೆಂಡರ್ ಪುಸ್ತಕದ ಸ್ಟಾಂಡರ್ಡ್ ಟೆಂಡರ್ ಡಾಕ್ಯುಮೆಂಟ್ ಕೆ/ಡಬ್ಲ್ಯೂ–4ರಲ್ಲಿನ ಅಂಶಗಳಿಗೆ ಬದ್ಧರಾಗಿರಬೇಕೆಂದು, ಟೆಂಡರ್‌ಗಿಟ್ಟ ಮೊತ್ತ, ಟೆಂಡರ್ ವ್ಯಾಲಿಡಿಟಿ, ಟೆಂಡರ್ ಸಲ್ಲಿಸಲು ಗುತ್ತಿಗೆದಾರರು ಪಾಲಿಸಬೇಕಾದ ನಿಯಮಗಳು, ತಿದ್ದುಪಡಿಗಳ ಸರಿಪಡಿಸುವಿಕೆ, ವ್ಯತ್ಯಾಸಗಳು, ಗುತ್ತಿಗೆದಾರರು ಸಲ್ಲಿಸಬೇಕಾದ ಠೇವಣಿ ಮೊತ್ತ, ಸೆಕ್ಯೂರಿಟಿ ಠೇವಣಿ ಮೊತ್ತ ಇತ್ಯಾದಿ ವಿವರಗಳು ಲಭ್ಯವಿರುತ್ತವೆ.

6) ಇನ್ನುಳಿದ ಎಲ್ಲ ವಿವರಗಳನ್ನು ಕಚೇರಿಯ ವೇಳೆಯಲ್ಲಿ ಈ ಕಚೇರಿಯಲ್ಲಿ ಹಾಗೂ ಪೂರ್ವ ಟೆಂಡರ್ ಸಭೆಯಲ್ಲಿ ಪಡೆಯಬಹುದು ಕೆಳಗೆ ನಮೂದಿಸಿದ ದಿನಾಂಕಗಳಲ್ಲಿ ಯಾವುದಾದರೂ ರಜಾ ದಿನವಾಗಿದ್ದಲ್ಲಿ ಮುಂದಿನ ಕಚೇರಿಯ ಕಾರ್ಯನಿರ್ವಹಿಸುವ ದಿನಾಂಕವನ್ನು ಕಡೆಯ ದಿನವೆಂದು ಪರಿಗಣಿಸುವುದು.

7) ಭರ್ತಿ ಮಾಡಿದ ಮೊಹರ್ ಬಂದ ಟೆಂಡರ್‌ಗಳನ್ನು ಮುಖ್ಯ ಇಂಜಿನೀಯರರು ಸಣ್ಣ ನೀರಾವರಿ (ಉ)ವಲಯ ಬಿಜಾಪೂರ, ಅಧೀಕ್ಷಕ ಇಂಜಿನೀಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರು ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಚೇರಿಗಳಲ್ಲಿ ಇರಿಸಿದ ಮೊಹರ್ ಮಾಡಿದ ಟೆಂಡರ್ ಪೆಟ್ಟಿಗೆಯಲ್ಲಿ ನಿಗದಿತ ಸಮಯದಲ್ಲಿ ಸ್ವೀಕರಿಸಲಾಗುವುದು.

8) ಇನ್ನುಳಿದ ವಿವರಗಳನ್ನು ಹಾಗೂ ನಿಯಮಗಳನ್ನು ಮಾದರಿ ಗುತ್ತಿಗೆ ದಾಖಲೆ (ಕೆ/ಡಬ್ಲ್ಯೂ–4)ದಲ್ಲಿ ವಿವರಿಸಲಾಗಿದ್ದು ಗುತ್ತಿಗೆದಾರರು ನಿಯಮಾವಳಿಗಳನ್ನು ಸಂಪೂರ್ಣ ಅಭ್ಯಸಿಸಿ ಅರ್ಥೈಸಿಕೊಳ್ಳಲು ಸೂಚಿಸಲಾಗಿದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು ಮೊತ್ತ (ರೂ. ಗಳಲ್ಲಿ) | ಟೆಂಡರ್ ಫಾರಂ ಬೆಲೆ ರೂ.+ತೆರಿಗೆ ಪ್ರತ್ಯೇಕ ಹಿಂದಿರುಗಿ ಸಲಾಗದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| 1 | ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಬೋರಗಾಂವ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ | 435.27 | 653000/– | 25000+ ತೆರಿಗೆ | 18 ತಿಂಗಳು (ಮಳೆಗಾಲ ಸೇರಿ) |

ಮೇಲಿನ ಕಾಮಗಾರಿಗಳಿಗೆ ಈ ಕೆಳಗಿನಂತೆ ದಿನಾಂಕಗಳನ್ನು ನಿಗದಿಪಡಿಸಲಾಗಿದೆ.

**1)** ಖಾಲಿ ಟೆಂಡರ್ ಪುಸ್ತಕಗಳಿಗಾಗಿ ಅರ್ಜಿ ಸಲ್ಲಿಸಿ ಖಾಲಿ ಟೆಂಡರ್ ಪುಸ್ತಕಗಳನ್ನು ಈ ಕಛೇರಿಯಲ್ಲಿ ಪಡೆಯುವ ದಿನಾಂಕಗಳು (ಕಚೇರಿ ವೇಳೆಯಲ್ಲಿ) : 09/11/2009 ರಿಂದ 13/11/2009
**(ಸದರಿ ಕಾಮಗಾರಿಗಳಿಗಾಗಿ ಅವಶ್ಯವಿರುವ ಈ ಕೆಳಗಿನ ಷರತ್ತುಗಳಲ್ಲಿನ ಕ್ರಮ ಸಂಖ್ಯೆ 10(I) ಯಂತ್ರೋಪಕರಣಗಳನ್ನು ಸ್ವತಃ ಅಥವಾ ಲೀಜ್ ಮೇಲೆ ಹೊಂದಿರುವ, ಲೀಜ್ ಆಗಿದ್ದಲ್ಲಿ ಜಿ.ಪಿ.ಎ.ಮೂಲ ದಾಖಲಾತಿ ಒದಗಿಸುವುದು, ಹಾಗೂ ಶೇಕಡಾ 50ರಷ್ಟು ವಾಹನಗಳ ಸ್ವಂತ ಮಾಲಿಕತ್ವ ಹೊಂದಿರುವ ವಿವರಗಳನ್ನು ಅರ್ಜಿಯ ಜೊತೆಗೆ ಲಗತ್ತಿಸಿ ಅರ್ಜಿಯನ್ನು ಸಲ್ಲಿಸುವುದು**).

2) ಪೂರ್ವ ಟೆಂಡರ್ ಸಭೆಯ ದಿನಾಂಕ 23–11–09 (ಕಾರ್ಯನಿರ್ವಾಹಕ ಇಂಜನೀಯರರು ಸಣ್ಣ ನೀರಾವರಿ ವಿಭಾಗ, ಬೆಳಗಾವಿ. ಇವರ ಕಛೇರಿಯಲ್ಲಿ ಮುಂ 11.00 ಘಂಟೆ)

3) ಭರ್ತಿ ಮಾಡಿದ ಟೆಂಡರ್ ಸ್ವೀಕರಿಸುವ ದಿನಾಂಕ : 8/12/2009 ಸಂಜೆ 16.00 ಘಂಟೆಯೊಳಗಾಗಿ

4) ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ :10/12/2009 ಸಂಜೆ 16.00 ಘಂಟೆ.(ಸಾಧ್ಯವಾದಲ್ಲಿ)

5) ಆರ್ಥಿಕ ಬಿಡ್‌ನ್ನು ತೆರೆಯುವ ದಿನಾಂಕ : ತದನಂತರ ತಿಳಿಸಲಾಗುವುದು.

**9) ಷರತ್ತುಗಳು**

1) ಟೆಂಡರ್ ಖಾಲಿ ಪುಸ್ತಕಗಳನ್ನು ಪಡೆಯಲು ಇಚ್ಚಿಸುವ ಗುತ್ತಿಗೆದಾರರು ಅರ್ಜಿಯ ಜೊತೆ ನೋಂದಾಯಿತ ಪ್ರಮಾಣ ಪತ್ರದ ಪ್ರತಿಯನ್ನು ಲಗತ್ತಿಸಬೇಕು.

2) ಅಗತ್ಯವಾದ ಮುಂಗಡ ಠೇವಣಿಯನ್ನು (ಇ.ಎಮ್.ಡಿ)ನಗದು ಅಥವಾ ಕಾರ್ಯನಿರ್ವಾಹಕ ಅಭಿಯಂತರರು ಸಣ್ಣ ನೀರಾವರಿ ವಿಭಾಗ, ಬೆಳಗಾವಿ. ಇವರ ಹೆಸರಿಗೆ ಬೆಳಗಾವಿಯಲ್ಲಿ ನಗದೀಕರಣಗೊಳಿಸಬಹುದಾದ ಬ್ಯಾಂಕರ್ ಚೆಕ್/ಡಿಡಿ/ಪೇ–ಆರ್ಡರ್/ ರೂಪದಲ್ಲಿ ಅಥವಾ ಕಾರ್ಯನಿರ್ವಾಹಕ ಅಭಿಯಂತರರು ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಹೆಸರಿಗೆ ಪ್ಲೆಡ್ಜ್ ಮಾಡಿದ ಸಣ್ಣ ಉಳಿತಾಯದ ಪತ್ರಗಳನ್ನು ಸಲ್ಲಿಸಬೇಕು.

3) ಖಾಲಿ ಟೆಂಡರ್ ಪುಸ್ತಕಗಳನ್ನು ಪಡೆಯಲು ತಮ್ಮ ಮೂಲ ನೋಂದಣಿ ಪುಸ್ತಕ ತರುವುದು.
4) ಇ.ಎಮ್.ಡಿ ಮಾನ್ಯತೆಯು ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕದಿಂದ 135 ದಿನಗಳ ಅವಧಿಗೆ ಹೊಂದಿರಬೇಕು.
5) ಯಶಸ್ವಿ ಗುತ್ತಿಗೆದಾರರು ಭದ್ರತಾ ಠೇವಣಿ ಮೊತ್ತವನ್ನು ಟೆಂಡರ್ ಒಪ್ಪಂದ ಮಾಡಿಕೊಳ್ಳುವ ಪೂರ್ವದಲ್ಲಿ 5% ರಷ್ಟು ಭರಣಾ ಮಾಡಬೇಕು. (ಅಂಗೀಕರಿಸಲ್ಪಟ್ಟ ಮೊತ್ತಕ್ಕೆ)

10) ಖಾಲಿ ಟೆಂಡರ್ ಪುಸ್ತಕಗಳಿಗೆ ಅರ್ಜಿ ಸಲ್ಲಿಸುವ ಗುತ್ತಿಗೆದಾರರು ಕೆ/ಡಬ್ಲ್ಯೂ–4 ಸಕ್ಷಮ–3ರಂತೆ ಅರ್ಹತೆ ಹೊಂದುವುದು ಅವಶ್ಯವಾಗಿದೆ. ಅರ್ಜಿಯ ಜೊತೆಗೆ

i. ಮುಖ್ಯವಾಗಿ ಹಾಗೂ ಮಹತ್ವವಾಗಿರುವ ಈ ಕೆಳಕಂಡ ಯಂತ್ರೋಪಕರಣಗಳನ್ನು ಸ್ವತಃ ಅಥವಾ ಲೀಜ್ ಮೇಲೆ ಹೊಂದಿರಬೇಕು.ಲೀಜ್ ಆಗಿದ್ದಲ್ಲಿ ಜಿ.ಪಿ.ಎ.ಮೂಲ ದಾಖಲಾತಿ ಒದಗಿಸುವುದು ಶೇಕಡಾ 50ರಷ್ಟು ವಾಹನಗಳ ಸ್ವಂತ ಮಾಲಿಕತ್ವ ಹೊಂದಿರಬೇಕು.

- ❖ ಎಕ್ಸ್‌ಕವೇಟರ್ =1 ಸಂಖ್ಯೆ.
- ❖ ಲಾರಿಗಳು /ಟಿಪ್ಪರ್‌ಗಳು =2 ಸಂಖ್ಯೆ
- ❖ ಕಾಂಕ್ರೀಟ್ ಮಿಕ್ಸರ್ ಹಾಪರ್‌ನೊಂದಿಗೆ =3 ಸಂಖ್ಯೆ
- ❖ ವೈಬ್ರೇಟರ್ (ಪೀನ್/ಟೇಬಲ್) =4 ಸಂಖ್ಯೆ
- ❖ ನೀರು ಎತ್ತುವ ಪಂಪ್ =4 ಸಂಖ್ಯೆ
- ❖ ಸೆಂಟ್ರಿಂಗ್ =100 ಘಮೀ. ಒಂದು ದಿನಕ್ಕೆ
- ❖ ಕ್ರೇನ್ (ಪೈಪ್ ಲೇಯಿಂಗ್‌ಗಾಗಿ) =1 ಸಂಖ್ಯೆ

11) ತಾಂತ್ರಿಕ ಬಿಡ್‌ನಲ್ಲಿ ತಿಳಿಸಲಾದ ಎಲ್ಲಾ ವಿವರಗಳಿಗೆ ಸೂಕ್ತ ಪ್ರಾಧಿಕಾರದಿಂದ ಪಡೆದಿರುವ ಪ್ರಮಾಣ ಪತ್ರಗಳಿಗೆ ನೋಟರಿ ಅಥವಾ ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಿರಬೇಕು.(ಕಾರ್ಯನಿರ್ವಾಹಕ ಇಂಜನೀಯರ್‌ರವರಿಗಿಂತ ಕಡಿಮೆ ಅಲ್ಲದ)

12) ಯಾವುದೇ ಗುತ್ತಿಗೆದಾರರು ಸತತ ಮೂರು ಬಾರಿ ಖಾಲಿ ಬುಕ್‌ಲೆಟ್‌ಗಳನ್ನು ಪಡೆದು, ಟೆಂಡರ್‌ಗಳನ್ನು ಸಲ್ಲಿಸದೆ ಇದ್ದಲ್ಲಿ ಅಂತಹ ಗುತ್ತಿಗೆದಾರರ ಅರ್ಜಿ ಸ್ವೀಕರಿಸಲಾಗುವುದಿಲ್ಲ ಹಾಗೂ ಖಾಲಿ ಟೆಂಡರ್ ಪುಸ್ತಕ ವಿತರಿಸುವುದಿಲ್ಲ.

13) ಯಾವುದೇ ಕಾರಣ ನೀಡದೆ ಯಾವುದೇ ಅಥವಾ ಎಲ್ಲ ಟೆಂಡರ್‌ಗಳನ್ನು ತಿರಸ್ಕರಿಸುವ ಹಕ್ಕು ಸಕ್ಷಮ ಪ್ರಾಧಿಕಾರ ಹೊಂದಿರುತ್ತದೆ.

14) ಷರತ್ತಿನ ಟೆಂಡರ್‌ಗಳನ್ನು ಪರಿಗಣಿಸುವುದಿಲ್ಲ.

**ವ್ಹಿ.ಬಿ. ಕುಲಕರ್ಣಿ**

ಪಿ.ಆರ್. 829 ಕಾರ್ಯನಿರ್ವಾಹಕ ಇಂಜನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

### ಜಿಲ್ಲಾ ನೋಂದಣಾಧಿಕಾರಿಗಳು, ಕಾರವಾರ ಇವರ ನಡವಳಿಗಳು

### ನೇಮಕಾತಿ ಆದೇಶ

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಉತ್ತರ ಕನ್ನಡ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:**
1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ:ಜಿನೋ:ಸಿಬ್ಬಂದಿ 27/2001–02 ದಿನಾಂಕ: 07.01.2002.
2. ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:13:ಎಸ್‌ಬಿಸಿ:2001 ದಿನಾಂಕ:21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು, 2001.
3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ:EST:1–273/01–02, ದಿನಾಂಕ:01.08.2002 (ದಿನಾಂಕ:8.8.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ.)
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ: EST:1-273/01-02 ದಿನಾಂಕ: 23.11.2004.
5. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST:1-273/01-02 ದಿನಾಂಕ: 07.10.2008.

6. ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ:ಜಿನೋ ಸಿಬ್ಬಂದಿ–15/08–09 ದಿನಾಂಕ: 20.10.08.
7. ಈ ಕಛೇರಿಯ ರದ್ದತಿ ಆದೇಶ ಸಂಖ್ಯೆ: ಜಿನೋ ಸಿಬ್ಬಂದಿ–15/08–09 ದಿನಾಂಕ:28.1.09.
8. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ರೀ–ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST:1-273/01-02 ದಿನಾಂಕ: 28.08.2009.
9. ಸರ್ಕಾರದ ಆದೇಶ ಸಂಖ್ಯೆ: FD (SPL) 04 PET 2005 ದಿನಾಂಕ: 31.3.2006.

**ಪ್ರಸ್ತಾವನೆ:**

ಈ ಇಲಾಖೆಯ ಉತ್ತರ ಕನ್ನಡ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1)ರನ್ವಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ. ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಉತ್ತರ ಕನ್ನಡ ಜಿಲ್ಲೆ | ಒಂದು | ಒಂದು | ಎರಡು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಮತ್ತು ಮೀಸಲಾತಿ ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (4)ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿರುತ್ತಾರೆ.

ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಒಂದು ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಗೆ ಅನುಗುಣವಾಗಿ ಕೆಳಕಂಡ ಪರಿಶಿಷ್ಟ ಜಾತಿ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ನೇಮಕಾತಿಗಾಗಿ ಅಲಾಟ್ ಮಾಡಿದ್ದರ ಮೇರೆ ಕೆಳಕಂಡ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಉಪ ನೋಂದಣಿ ಕಛೇರಿ, ಕುಮಟಾ ಇಲ್ಲಿಗೆ ಉಲ್ಲೇಖ (6)ರನ್ವಯ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿದ್ದರೂ ಸಹ ಸದರಿ ಅಭ್ಯರ್ಥಿಯು ನೇಮಕ ಮಾಡಿದ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗದೇ ಇದ್ದ ಕಾರಣ ಇವರಿಗೆ ನೀಡಿದ ಉಲ್ಲೇಖ (6)ರ ನೇಮಕಾತಿ ಆದೇಶವನ್ನು ಉಲ್ಲೇಖ (7)ರನ್ವಯ ರದ್ದುಪಡಿಸಲಾಯಿತು ಹಾಗೂ ಈ ವಿಷಯವನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೂ ಹಾಗೂ ಸದರಿ ಅಭ್ಯರ್ಥಿಗೂ ತಿಳಿಸಲಾಯಿತು.

| | | |
|---|---|---|
| 1 | ಯಲ್ಲಪ್ಪರಾಮು ಕಟ್ಟೀಮನಿ<br>S/o ರಾಮುಕಟ್ಟೀಮನಿ ಚಂದಾವಾಬಡಿ ರೋಡ್,<br>ವೆಂಕಟರಮಣಗಲ್ಲಿ ಬಿಜಾಪುರ. | ಪರಿಶಿಷ್ಟ ಪಂಗಡ<br>ಮಾಜಿ ಸೈನಿಕ ಅಭ್ಯರ್ಥಿ<br>ಮುಖ್ಯ ಪಟ್ಟಿ |

ಈ ರೀತಿ ಮೇಲ್ಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯು ಈ ಜಿಲ್ಲೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಕೆಲಸಕ್ಕೆ ಹಾಜರಾಗದೇ ಇದ್ದ ಕಾರಣ ಹಾಗೂ ಇವರು ತಮ್ಮ ನೇಮಕಾತಿ ಹಕ್ಕನ್ನು ಕಳೆದುಕೊಂಡ ಕಾರಣ ಮೇಲ್ಕಂಡ ಯಲ್ಲಪ್ಪ ರಾಮು ಕಟ್ಟೀಮನಿ ಎಂಬ ಅಭ್ಯರ್ಥಿಯ ಬದಲಿಗೆ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (8)ರ ಅವರ ರೀ–ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ನೇಮಕಾತಿಗಾಗಿ ಅಲಾಟ್ ಮಾಡಿ ಈ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಅಭ್ಯರ್ಥಿಯನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಜಿನೋ:ಸಿಬ್ಬಂದಿ:16:09–10, ದಿನಾಂಕ: 10ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (8)ರಲ್ಲಿನ ರೀ–ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 5800–100–6000–125–6500–150–7100–175–7800–200–8600–225–9500–250–10500 ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ

ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಜನ್ಮ ದಿನಾಂಕ | 7.9.2002 ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ–ತಿಂ–ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | ಪರಶುರಾಮ ಸಾಬು ಪೀಡಕರ ಪೋಸ್ಟ್ ತೊರವಿ ತಾಲ್ಲೂಕು, ಜಿಲ್ಲೆ ಬಿಜಾಪುರ–586101 | SC | 10.02.1960 | 42.06.27 | SSLC:55.667 | ಜಿಲ್ಲಾ ನೋಂದಣಿ ಕಛೇರಿ, ಕಾರವಾರ (ಉತ್ತರ ಕನ್ನಡ ಜಿಲ್ಲೆ) | ಪರಿಶಿಷ್ಟ ಜಾತಿ ಮಾಜಿ ಸೈನಿಕ ಅಭ್ಯರ್ಥಿ ಹೆಚ್ಚುವರಿ ಪಟ್ಟಿ |

S.S.L.C. ಅಂಕಪಟ್ಟಿಯ ನೋಂದಣಿ ಸಂಖ್ಯೆ: 166407 / April 1977 ರ ಪ್ರಕಾರ ಮೇಲ್ಕಂಡ ಅಭ್ಯರ್ಥಿಯ ಜನ್ಮ ದಿನಾಂಕವು 10.02.1960 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು, ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್ ಮತ್ತು ಕೆ.ಸಿ.ಎಸ್ (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್ (ಸಿ.ಸಿ.ಎ) ನಿಯಮಗಳು 1957ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷೆ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್ (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ಅಭ್ಯರ್ಥಿಯು ತಮ್ಮ Pass Port Size ನ ಎರಡು ಇತ್ತೀಚಿನ ಫೋಟೋಗಳನ್ನು ತಾವು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿನ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಗೂ SSLC ಮೂಲ ಅಂಕಪಟ್ಟಿಯನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಮತ್ತು ಶಾಲೆಯಿಂದ ನೀಡಿದ ಮೂಲ TC ಯನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
10. ಅಭ್ಯರ್ಥಿಯು ಮಾಜಿ ಸೈನಿಕ ಅಭ್ಯರ್ಥಿಯಾಗಿರುವುದರಿಂದ ಸೇನಾ ಬಿಡುಗಡೆ ಮೂಲ ಪ್ರಮಾಣ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

12. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.
13. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
14. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ, ಒಬ್ಬರೆ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್ (ನಡತೆ) ನಿಯಮಗಳು, 1966ರಲ್ಲಿನ ನಿಯಮ 28ರ ರೀತ್ಯ ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿರುವ ಘೋಷಣಾ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
16. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
17. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/– ರೂ., ಗಳ ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ಮುಚ್ಚಳಿಕೆ ನಮೂನೆ–1 ಅನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.
18. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೆ ರದ್ದುಪಡಿಸಲಾಗುವುದು.
19. ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/– ರೂ. ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ಮುಚ್ಚಳಿಕೆ ನಮೂನೆ–2 ಅನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.
25. ಸರ್ಕಾರದವರು ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಗೆ ಬದಲಾಗಿ ದಿನಾಂಕ: 1.4.2006 ರಿಂದ ಜಾರಿಗೆ ಬರುವಂತೆ ಉಲ್ಲೇಖ (9) ರ ಸರ್ಕಾರದ ಆದೇಶದಲ್ಲಿ ಹೊಸದಾಗಿ New Defined Contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ: 01.04.2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆ ಎಂದು ಆದೇಶ ಮಾಡಿರುತ್ತಾರೆ. ಆದ್ದರಿಂದ ಈ ಜಿಲ್ಲೆಯಲ್ಲಿ ನೇಮಕ ಹೊಂದಿದ ಈ ನೌಕರರು ಸರ್ಕಾರದ ಉಲ್ಲೇಖ (9)ರ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ಉಲ್ಲೇಖ (9)ರ ನಿರ್ದೇಶನಕ್ಕೆ ಸದರಿ ನೌಕರರು ಬದ್ಧರಾಗಿರತಕ್ಕದ್ದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

ಪಿ.ಆರ್. 790

## ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ

**ಶ್ರೀ ಡಿ.ದೇವರಾಜ ಅರಸು ಬಡಾವಣೆ, 'ಎ' ಬ್ಲಾಕ್, ಪಿ.ಬಿ.ರಸ್ತೆ, ದಾವಣಗೆರೆ–577006**

**ಟೆಂಡರ್ ಪ್ರಕಟಣೆ (ಎರಡು ಲಕೋಟೆ ಬಿಡ್ ಪದ್ಧತಿ)**

**ನಂ:ದಾನಪ್ರಾ:ತಾಶಾ:03:ಟೆಂಪ್ರ:01:2009–10, ದಿನಾಂಕ: 22ನೇ ಸೆಪ್ಟೆಂಬರ್ 2009**

ಆಯುಕ್ತರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ಶ್ರೀ ಡಿ.ದೇವರಾಜ್ ಅರಸು ಬಡಾವಣೆ, 'ಎ' ಬ್ಲಾಕ್, ಪಿ.ಬಿ.ರಸ್ತೆ, ದಾವಣಗೆರೆ ಇವರು ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಒಂದನೇ ದರ್ಜೆ ಗುತ್ತಿಗೆದಾರರುಗಳಿಂದ ಈ ಕೆಳಗೆ ನಮೂದಿಸಿರುವ ಕಾಮಗಾರಿಗೆ ಮೊಹರಾದ ಐಟಂವಾರು ಟೆಂಡರ್‌ನ್ನು ದ್ವಿಪ್ರತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧಿನಿಯಮ–2000 ಹಾಗೂ ಸ್ಟ್ಯಾಂಡರ್ಡ್ ಡಾಕ್ಯುಮೆಂಟ್ ಕೆ/ಡಬ್ಲ್ಯೂ–4 ರಂತೆ ಆಹ್ವಾನಿಸಲಾಗಿದೆ. (ಒಂದನೇ ಲಕೋಟೆ ತಾಂತ್ರಿಕ ಬಿಡ್ ಮತ್ತು ಎರಡನೇ ಲಕೋಟೆ ಆರ್ಥಿಕ ಬಿಡ್ ಇರುತ್ತದೆ ಲಕೋಟೆಯ ಮೇಲೆ ಕಾಮಗಾರಿ ಹೆಸರು ಹಾಗೂ ಬಿಡ್‌ನ ವಿವರಗಳನ್ನು ನಮೂದಿಸಬೇಕು).

1. ಟೆಂಡರ್ ಫಾರಂಗೆ ಅರ್ಜಿ ಸಲ್ಲಿಸಲು (ನಿಗದಿತ ಟೆಂಡರ್ ಫಾರಂ ಬೆಲೆಯೊಂದಿಗೆ) ಕೊನೆಯ ದಿನಾಂಕ:11–11–2009ರ ಬುಧವಾರ ಸಂಜೆ 4.00 ಗಂಟೆವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ವಿತರಿಸುವ ದಿನಾಂಕ:18–11–2009ರ ಬುಧವಾರ ಸಂಜೆ 4.00 ಗಂಟೆವರೆಗೆ
3. ಬಿಡ್ ಪೂರ್ವ ಮೀಟಿಂಗ್ ದಿನಾಂಕ:25–11–2009ರ ಬುಧವಾರ ಬೆಳಿಗ್ಗೆ 11.00 ಗಂಟೆಗೆ ಸ್ಥಳ: ಸಹಾಯಕ ಕಾರ್ಯಪಾಲಕ ಅಭಿಯಂತರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ ಇವರ ಕೊಠಡಿಯಲ್ಲಿ.
4. ಭರ್ತಿ ಮಾಡಿದ ಟೆಂಡರ್ ಸಲ್ಲಿಸುವ ದಿನಾಂಕ:30–11–2009ರ ಸೋಮವಾರ ಸಂಜೆ 4.00 ಗಂಟೆವರೆಗೆ
5. ತಾಂತ್ರಿಕ ಬಿಡ್ ತೆರೆಯುವ ದಿನಾಂಕ:01–12–2009ರ ಮಂಗಳವಾರ ಬೆಳಿಗ್ಗೆ 11.30 ಗಂಟೆ ನಂತರ.
6. ಆರ್ಥಿಕ ಬಿಡ್ ತೆರೆಯುವ ದಿನಾಂಕ:04–12–2009ರ ಶುಕ್ರವಾರ ಮಧ್ಯಾಹ್ನ 12.30 ಗಂಟೆಯ ನಂತರ.

ಟೆಂಡರ್ ಫಾರಂ ಬೆಲೆಯನ್ನು (ಹಿಂದಿರುಗಿಸುವುದಿಲ್ಲ) ಹಾಗೂ ಇ.ಎಂ.ಡಿ.ಯ ಮೊತ್ತವನ್ನು ಆಯುಕ್ತರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ ಇವರಿಗೆ ಪಾವತಿಯಾಗುವಂತೆ ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿಮ್ಯಾಂಡ್ ಡ್ರಾಫ್ಟ್‌ನ್ನು ಅರ್ಜಿಯ ಜೊತೆಗೆ ಲಗತ್ತಿಸತಕ್ಕದ್ದು, ಮೊಹರು ಮಾಡಿದ ಟೆಂಡರುಗಳ ಲಕೋಟೆಯ ಮೇಲೆ ಕಾಮಗಾರಿಯ ಹೆಸರನ್ನು ಬರೆದಿರಬೇಕು.

| ಕ್ರ, ಸಂ | ಕಾಮಗಾರಿಯ ಹೆಸರು | ಟೆಂಡರ್‌ಗೆ ಇಟ್ಟಿರುವ ಟೆಂಡರ್ ಮೊತ್ತ (ರೂ.ಗಳಲ್ಲಿ) | ಇ.ಎಂ.ಡಿ. ಶೇ.$1^1/_2$ (ರೂ.ಗಳಲ್ಲಿ) | ಟೆಂಡರ್ ಪತ್ರದ ಬೆಲೆ (ರೂ.ಗಳಲ್ಲಿ) | ಕೆಲಸ ಪೂರ್ಣಗೊಳಿಸುವ ಕಾಲಮಿತಿ | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | ಶ್ರೀ ಜೆ.ಹೆಚ್.ಪಟೇಲ್ ಬಡಾವಣೆಯ ಪ್ರದೇಶದಲ್ಲಿ ಬರುವ ರಸ್ತೆಗಳಿಗೆ ಸರ್ಫೇಸ್ ಡ್ರೈನ್ ಸಂಬಂಧ ಸಿಮೆಂಟ್ ಕಾಂಕ್ರೀಟ್ ಡ್ರೈನ್ ನಿರ್ಮಾಣ ಮಾಡುವುದು. | 5,03,25,181.00 | 7,54,880.00 | 50,500–00 + ತೆರಿಗೆ | 6 ತಿಂಗಳು (ಮಳೆಗಾಲ ಸೇರಿ) | 1 ದರ್ಜೆ & ಮೇಲ್ಪಟ್ಟು |

1. ಅರ್ಜಿಯೊಂದಿಗೆ ಲೈಸೆನ್ಸ್, ಕಾಮಗಾರಿ ನಿರ್ವಹಿಸಿರುವ ದೃಢೀಕರಣ ಪತ್ರ, ಆದಾಯ ತೀರುವಳಿ ದಾಖಲೆ ಪತ್ರಗಳನ್ನು ಲಗತ್ತಿಸತಕ್ಕದ್ದು.
2. **ತಾಂತ್ರಿಕ ಅರ್ಹತೆ:** ಗುತ್ತಿಗೆದಾರರು ಟೆಂಡರ್ ಕರೆದ ಕಾಮಗಾರಿಯಂತಹ ಕಾಮಗಾರಿಗಳನ್ನು ದಕ್ಷತೆಯಿಂದ ನಿರ್ವಹಿಸಿ ತೃಪ್ತಿಕರವಾಗಿ ಟೆಂಡರ್ ಮೊತ್ತದ ಶೇ.80 ಕ್ಕಿಂತ ಕಡಿಮೆ ಇಲ್ಲದ ಒಂದು ಕಾಮಗಾರಿಯನ್ನು ಗುತ್ತಿಗೆದಾರರು ಹಿಂದಿನ ಐದು(2005–06 ರಿಂದ 2009–10) ಆರ್ಥಿಕ ವರ್ಷಗಳ ಬ್ಲಾಕ್ ಅವಧಿಯಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರೈಸಿರಬೇಕು. ಕೆಲಸ ನಿರ್ವಹಿಸಿದ ಬಗ್ಗೆ ಕಾರ್ಯ ಅರ್ಹತಾ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ತಾಂತ್ರಿಕ ಬಿಡ್ ನೊಂದಿಗೆ ಪ್ರತ್ಯೇಕವಾಗಿ ತಪ್ಪದೇ ಲಗತ್ತಿಸಬೇಕು.
3. **ಆರ್ಥಿಕ ವಹಿವಾಟು:–** ಕಳೆದ ಐದು ಆರ್ಥಿಕ ವರ್ಷಗಳ ಅವಧಿಯಲ್ಲಿ ಯಾವುದಾದರು ಕನಿಷ್ಠ ಎರಡು ಆರ್ಥಿಕ ವರ್ಷಗಳಲ್ಲಿ ಕಾಮಗಾರಿಯ ಟೆಂಡರ್ ಮೊತ್ತಕ್ಕೆ ಎರಡರಷ್ಟು (ರೂ.10.25 ಕೋಟಿಗಳ) ಆರ್ಥಿಕ ವಹಿವಾಟು ಹೊಂದಿರಬೇಕು ಹಾಗೂ ಚಾರ್ಟರ್ಡ್ ಅಕೌಂಟೆಂಟ್‌ರಿಂದ ದೃಢೀಕರಿಸಿದ ಆಯವ್ಯಯ ಪಟ್ಟಿ ಸಲ್ಲಿಸಬೇಕು.
4. ಕಾಮಗಾರಿ ನಿರ್ವಹಿಸುವವರೇ ಬೇಕಾದ ಆರ್ಥಿಕ ಸಾಮರ್ಥ್ಯ ಹೊಂದಿರುವವರೇ ಎನ್ನುವ ಬಗ್ಗೆ ಟೆಂಡರ್ ಮೊಬಲಗಿನ ಶೇ.30ಕ್ಕೆ ಸಮನಾದ ಮೊಬಲಗಿನ (ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ) ಬ್ಯಾಂಕರ್ ಸರ್ಟಿಫಿಕೇಟ್ ತಪ್ಪದೆ ನೀಡಬೇಕು.

5. ಗುತ್ತಿಗೆದಾರರು ಈ ಕೆಳಗಿನ ಯಂತ್ರೋಪಕರಣಗಳ ಮಾಲೀಕತ್ವ ಹೊಂದಿರಬೇಕು.

| ಕ್ರ. ಸಂ. | ಯಂತ್ರೋಪಕರಣಗಳು | ಸಂಖ್ಯೆ | ಒಡೆತನಕ್ಕೆ ಸಂಬಂಧಿಸಿದ ಪುರಾವೆಗಳು |
|---|---|---|---|
| ಎ) | ಕ್ರಾಂಕ್ರೀಟ್ ಮಿಕ್ಸರ್ | 10 | ಖರೀದಿ ಇನ್ವಾಯ್ಸ್/ಖರೀದಿ ಬಿಲ್/ಕ್ರಯ ಪತ್ರ ಅಥವಾ ಬಾಡಿಗೆ ಕರಾರು ಒಡಂಬಡಿಕೆ ಪತ್ರ |
| ಬಿ) | ಬ್ಯಾಚಿಂಗ್ ಪ್ಲಾಂಟ್ (15–30 ಘನ ಮೀಟರ್/ಪ್ರತಿ ಗಂಟೆಗೆ) | 01 | ಖರೀದಿ ಇನ್ವಾಯ್ಸ್/ಖರೀದಿ ಬಿಲ್/ಕ್ರಯ ಪತ್ರ ಅಥವಾ ಬಾಡಿಗೆ ಕರಾರು ಒಡಂಬಡಿಕೆ ಪತ್ರ |
| ಸಿ) | ಪಿನ್ ವೈಬ್ರೇಟರ್ | 10 | ಖರೀದಿ ಇನ್ವಾಯ್ಸ್/ಖರೀದಿ ಬಿಲ್/ಕ್ರಯ ಪತ್ರ ಅಥವಾ ಬಾಡಿಗೆ ಕರಾರು ಒಡಂಬಡಿಕೆ ಪತ್ರ |
| ಡಿ) | ಪ್ಲೇಟ್ ವೈಬ್ರೇಟರ್ | 10 | ಖರೀದಿ ಇನ್ವಾಯ್ಸ್/ಖರೀದಿ ಬಿಲ್/ಕ್ರಯ ಪತ್ರ ಅಥವಾ ಬಾಡಿಗೆ ಕರಾರು ಒಡಂಬಡಿಕೆ ಪತ್ರ |
| ಇ) | ಸ್ಟೀಲ್ ಸೆಂಟರಿಂಗ್ | ಕೆಲಸಕ್ಕೆ ಬೇಕಾಗುವಷ್ಟು | ಖರೀದಿ ಇನ್ವಾಯ್ಸ್/ಖರೀದಿ ಬಿಲ್/ಕ್ರಯ ಪತ್ರ ಅಥವಾ ಬಾಡಿಗೆ ಕರಾರು ಒಡಂಬಡಿಕೆ ಪತ್ರ |
| ಎಫ್) | ವಾಟರ್ ಟ್ಯಾಂಕರ್‌ಗಳು | 5 | ಖರೀದಿ ಇನ್ವಾಯ್ಸ್/ಖರೀದಿ ಬಿಲ್/ಕ್ರಯ ಪತ್ರ ಅಥವಾ ಬಾಡಿಗೆ ಕರಾರು ಒಡಂಬಡಿಕೆ ಪತ್ರ |
| ಜಿ) | ಸಾಮಗ್ರಿ ಸಾಗಾಣಿಕೆ ವಾಹನಗಳು | 6 | ಖರೀದಿ ಇನ್ವಾಯ್ಸ್/ಖರೀದಿ ಬಿಲ್/ಕ್ರಯ ಪತ್ರ ಅಥವಾ ಬಾಡಿಗೆ ಕರಾರು ಒಡಂಬಡಿಕೆ ಪತ್ರ |

6. ಕಾಮಗಾರಿಗೆ ಅವಶ್ಯವಿರುವ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರು ಒದಗಿಸಿಕೊಳ್ಳತಕ್ಕದ್ದು ಮತ್ತು ಇಲಾಖೆಯಿಂದ ಯಾವುದೇ ಸಾಮಗ್ರಿಗಳನ್ನು ನೀಡಲಾಗುವುದಿಲ್ಲ.
7. ಕಾಮಗಾರಿಯನ್ನು ಕೈಗೆತ್ತಿಕೊಳ್ಳುವ ಗುತ್ತಿಗೆದಾರರಿಂದ ಶೇ.1 ರಷ್ಟು ಕಾರ್ಮಿಕ ಕಲ್ಯಾಣ ಸುಂಕ ಕಡಿತಗೊಳಿಸಲಾಗುವುದು. ಅಲ್ಲದೆ ಸದ್ರಿ ಕಾಯ್ದೆ/ಆದೇಶಗಳಿಗೆ ಅನುಗುಣವಾಗಿ ಸುಂಕವನ್ನು ಗಣನೆಗೆ ತೆಗೆದುಕೊಂಡು ಟೆಂಡರ್ ದರ ನಮೂದಿಸತಕ್ಕದ್ದೆಂದು ತಿಳಿಯಪಡಿಸಲಾಗಿದೆ.
8. ಗುತ್ತಿಗೆದಾರರು ನಮೂದಿಸಿದ ಒಟ್ಟು ಗುತ್ತಿಗೆ ಮೊತ್ತವು ಟೆಂಡರ್ ಮೊತ್ತಕ್ಕೆ ಹೋಲಿಸಲಾಗಿ ಕಡಿಮೆ ಇದ್ದರೆ ಅವುಗಳ ವ್ಯತ್ಯಾಸದ ಮೊತ್ತವನ್ನು ಡಿ.ಡಿ.ರೂಪದಲ್ಲಿ ಆಯುಕ್ತರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ ಇವರ ಹೆಸರಿನಲ್ಲಿ ಪಡೆದು ಟೆಂಡರಿನ ಜೊತೆಗೆ ಸಲ್ಲಿಸಬೇಕು. ಇಲ್ಲವಾದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.
9. ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ಮೂರು ಹಂತದಲ್ಲಿ ಕಾಮಗಾರಿಯ ಪ್ರಗತಿಯ ಹಂತದ ಛಾಯಾ ಚಿತ್ರದ ಪ್ರತಿ (ಫೋಟೋ) ನೀಡುವುದು ಹಾಗೂ ನಾಮಫಲಕ ಅಳವಡಿಸುವುದು.
10. ಗುತ್ತಿಗೆದಾರರು ತಮ್ಮ ಸ್ವಂತ ವೆಚ್ಚದಲ್ಲಿ ಸಾಮಗ್ರಿಗಳನ್ನು ತಪಾಸಣೆ ಮಾಡಿ ಪ್ರಮಾಣ ಪತ್ರಗಳನ್ನು ನೀಡತಕ್ಕದ್ದು.
11. ದರವಾರವು ಎಲ್ಲಾ ತೆರಿಗೆ ಮತ್ತು ಕರಗಳನ್ನು ಸೇರಿರತಕ್ಕದ್ದು.
12. ಕಾಮಗಾರಿಯ ಗುಣಮಟ್ಟದ ಬಗ್ಗೆ ಮೂರನೇ ವ್ಯಕ್ತಿಯಿಂದ ಕಾಮಗಾರಿಯನ್ನು ತೃಪ್ತಿಕರವಾಗಿರುವ ಬಗ್ಗೆ ದೃಢೀಕರಣ ಪತ್ರ ಬಂದ ಮೇಲೆ ಬಿಲ್ ಪಾವತಿಸಲಾಗುವುದು ಇದಕ್ಕೆ ತಾವುಗಳು ಬದ್ಧರಾಗಿರತಕ್ಕದ್ದು.
13. ಮೇಲೆ ತೋರಿಸಿರುವ ಯಾವುದೇ ದಿನಾಂಕದಂದು ರಜೆ ಇದ್ದಲ್ಲಿ ಮುಂದಿನ ಕಛೇರಿ ಕೆಲಸದ ದಿನಗಳನ್ನು ಪರಿಗಣಿಸತಕ್ಕದ್ದು.
14. ಯಾವುದೇ ಕಾರಣ ನೀಡದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಅಂಗೀಕರಿಸುವ/ತಿರಸ್ಕರಿಸುವ ಹಕ್ಕನ್ನು ಪ್ರಾಧಿಕಾರವು ಕಾಯ್ದಿರಿಸಿಕೊಂಡಿರುತ್ತದೆ.
15. ಮುಂದೆ ಬದಲಾಗಬಹುದಾದ ಪ್ರಚಲಿತ ನಿಯಮಗಳಿಗೆ ಹಾಗೂ ಹೆಚ್ಚಿನ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು ಹಾಗೂ ಹೆಚ್ಚಿನ ವಿವರಗಳನ್ನು ಕೆಲಸದ ದಿನಗಳಲ್ಲಿ ಪ್ರಾಧಿಕಾರದ ಸಹಾಯಕ ಕಾರ್ಯಪಾಲಕ ಅಭಿಯಂತರನ್ನು ಸಂಪರ್ಕಿಸಿ ಪಡೆಯಬಹುದಾಗಿದೆ.

**ಟಿಪ್ಪಣಿ:–**

1) ಗುತ್ತಿಗೆದಾರರು ತಾಂತ್ರಿಕ ಬಿಡ್‌ನ್ನು ತೆರೆಯುವ ಸಮಯದಲ್ಲಿ ಇತ್ತೀಚಿನ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಸಲ್ಲಿಸತಕ್ಕದ್ದು.

ಆಯುಕ್ತರು,
ದಾ–ಹ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ.

ಪಿ.ಡಿ. 119

